# 108 ದಿವ್ಯ ದೇಶ ಕ್ಷೇತ್ರ ವೈಭವ

## ಹನ್ನೆರಡು ಆಳ್ವಾರ್‌ಗಳ ಮಹಾತ್ಮೆ



ಪ್ರಕಾಶಕರು :

ಆರ್. ಗಾಂಧಿ ಟೂರ್ಸ್ (ರಿ)

ಬೆಂಗಳೂರು - 28

# 108 ದಿವ್ಯ ದೇಶ ಕ್ಷೇತ್ರ ವೈಭವ

* 12 ಆಳ್ವಾರ್‌ಗಳ ಚರಿತ್ರೆ
* 108 ದಿವ್ಯ ಕ್ಷೇತ್ರಗಳ ಪರಿಚಯ
* ವೆಂಕಟೇಶ ಸುಪ್ರಭಾತ ಮತ್ತಿತರ ಶ್ಲೋಕಗಳು


ಸಂಗ್ರಹ

ಆರ್. ಗಾಂಧಿ



ಪ್ರಕಾಶಕರು :

**ಆರ್. ಗಾಂಧಿ ಟೂರ್ಸ್ (ರಿ)**

**ಚಾರಿತ್ರಿಕ ದೇವಾಲಯ ಪ್ರವಾಸಗಳ ಆಯೋಜಕರು**

139/2, ಲಕ್ಷ್ಮಿ ಗಂಗಾ ಕಾಂಪ್ಲೆಕ್ಸ್, 2ನೇ ಮುಖ್ಯ ರಸ್ತೆ, 3ನೇ ಬ್ಲಾಕ್,
ತ್ಯಾಗರಾಜನಗರ, (ಶನೇಶ್ವರ ದೇವಸ್ಥಾನದ ಎದುರು) ಬೆಂಗಳೂರು – 28

# 108 ದಿವ್ಯ ದೇಶ ಕ್ಷೇತ್ರ ವೈಭವ

ಸಂಪಾದಕರು : ಆರ್. ಗಾಂಧಿ

ಪ್ರಕಾಶಕರು :

**ಆರ್. ಗಾಂಧಿ ಟೂರ್ಸ್ (ರಿ)**

**ಚಾರಿತ್ರಿಕ ದೇವಾಲಯ ಪ್ರವಾಸಗಳ ಆಯೋಜಕರು**

139/2, ಲಕ್ಷ್ಮಿ ಗಂಗಾ ಕಾಂಪ್ಲೆಕ್ಸ್, 2ನೇ ಮುಖ್ಯ ರಸ್ತೆ, 3ನೇ ಬ್ಲಾಕ್,
ತ್ಯಾಗರಾಜನಗರ, (ಶನೇಶ್ವರ ದೇವಸ್ಥಾನದ ಎದುರು) ಬೆಂಗಳೂರು – 28
☎ : 9945445809, 9902433500, 080-29740186, 26760367
e-mail: rgandhitours@gmail.com
web: www.rgandhitours.com
ಅನ್ನಪೂರ್ಣ ಪ್ರಕಾಶನ, ಸಿರಿಗೇರಿ
yswamycrpjcnagara@gmail.com



ಮೊದಲ ಮುದ್ರಣ : 2020

ಪುಟಗಳು : xvi + 192 + 16 ವರ್ಣ = 224

ಬೆಲೆ : ರೂ. 250/-

ಮುಖಪುಟ :
ಪುಟ ವಿನ್ಯಾಸ : ವಿ. ರಾಘವೇಂದ್ರ
ಮಾತೃಶ್ರೀ ಗ್ರಾಫಿಕ್ಸ್, ಮೊ. 94490 00155

ಮುದ್ರಕರು : ಶ್ರೀರಂಗ ಪ್ರಿಂಟರ್ಸ್ .ಪ್ರೈ.ಲಿ
ಬನಶಂಕರಿ ಬೆಂಗಳೂರು. 560070
080 – 26715813, 9731247855

# ಓದುವ ಮುನ್ನ...



ಈ ಪುಣ್ಯಭೂಮಿಯಲ್ಲಿ ಜನಿಸಿರುವ ಪ್ರತಿಯೊಬ್ಬರೂ ಯಾವುದೋ ಒಂದು ಕಾರಣದಿಂದ, ಕಾರಣಕ್ಕೋಸ್ಕರ ಹುಟ್ಟಿರುತ್ತಾರೆ. ಮನುಷ್ಯರಾದ ನಾವು ಏನೋ ಜನಿಸಿದ್ದೀವಿ, ಬೆಳೆದಿದ್ದೀವಿ, ಜೀವನ ಸಾಗಿಸಿ ಎಂದಾಗದೆ ಎಷ್ಟೋ ಜನ್ಮಗಳ ಪುಣ್ಯದಿಂದ ಹುಟ್ಟಿರುವ ನಾವು ಕೇವಲ ಹಣ, ಕೀರ್ತಿ ಸಂಪಾದನೆ ಮತ್ತು ಉನ್ನತ ಮಟ್ಟ ತಲುಪುವ ಉದ್ದೇಶವು ಇರಬಾರದು. ಪುನರಪಿ ಜನನಂ, ಪುನರಪಿ ಮರಣಂ, ಎನ್ನುವಂತೆ ಈ ಜೀವನ ಸಾಗರದಲ್ಲಿ ಮತ್ತೆ ಜನನ ಮರಣ ಚಕ್ರವು ಸುತ್ತುತ್ತಲೇ ಇರುತ್ತದೆ. ಈ ಚಕ್ರದಿಂದ ನಾವು ಹೊರಬರಬೇಕಾದರೆ ಅಂದರೆ ಮೋಕ್ಷ ಪಡೆಯಲು ಭಗವಂತನ ನಾಮಸ್ಮರಣೆಯನ್ನು ಮಾಡುತ್ತಾ ಭಗವಂತನಲ್ಲಿ ಲೀನವಾಗುವುದು ಅತೀ ಮುಖ್ಯ.

ಶ್ರೀ ಮಹಾವಿಷ್ಣು ಎಂದರೆ ಅಣು-ಅಣುವಿನಲ್ಲೂ, ಕಣ-ಕಣದಲ್ಲಿಯೂ ಕಾಣುವ ಜಗದ್ರಕ್ಷಕ, ಜಗದೋದ್ಧಾರಕನಾದ ಮಹಾವಿಷ್ಣು ಇಡೀ ಪ್ರಪಂಚದಲ್ಲಿ ವ್ಯಾಪಿಸಿರುವ ಮಹಾನ್ ದೈವ. ಮಹಾನ್ ವಿಷ್ಣುವು ಯುಗ-ಯುಗಳಿಂದ ಲೋಕಕಲ್ಯಾಣಕ್ಕೆ ಅನೇಕ ಭಂಗಿಗಳಲ್ಲಿ ವಿವಿಧ ಅವತಾರಗಳಲ್ಲಿ ಅವತರಿಸಿರುತ್ತಾರೆ.

ಮಹಾವಿಷ್ಣುವು ಪತ್ಯಕ್ಷವಾಗಿರುವ ದೇಗುಲಗಳಲ್ಲಿ ಹನ್ನೆರಡು ಆಳ್ವಾರುಗಳು ಮಂಗಳ ಶಾಸನವನ್ನು (ಸ್ತೋತ್ರ) ಹಾಡಿ ದೇವರನ್ನು ಮೆಚ್ಚಿಸಿ ಮೋಕ್ಷವನ್ನು ಪಡೆದಿದ್ದಾರೆ. ಶ್ರೀಮಹಾವಿಷ್ಣುವಿನ ಅಂಶಗಳೇ ಹನ್ನೆರಡು ಆಳ್ವಾರುಗಳಾಗಿ ಜನಿಸಿರುವುದು. ಆಳ್ವಾರುಗಳ ವಿವರವನ್ನು ಒಳಪುಟಗಳು ಒಳಗೊಂಡಿವೆ.

ಈ ದಿವ್ಯ ದೇಶಗಳನ್ನು ಕುರಿತು 1984ರಲ್ಲಿ ನಮಗೆ ವಿಷಯ ತಿಳಿಯಿತು. ನಮ್ಮಾಳ್ವಾರ್ ಜನ್ಮಸ್ಥಳವಾದ ಆಳ್ವಾರ್ ತಿರುನಗರ್ ಸ್ಥಳವನ್ನು ದರ್ಶಿಸಿದೆವು. ಆ ಸ್ಥಳದ ಮಹಾತ್ಮೆಯನ್ನು ಅರಿತು ಉಳಿದ ದಿವ್ಯದೇಶಗಳನ್ನು ಹುಡುಕಿ ಪ್ರತಿಯೊಂದು ಕ್ಷೇತ್ರವನ್ನು ದರ್ಶನ ಮಾಡಿ ಆ ಕ್ಷೇತ್ರಗಳ ಮಹಿಮೆಯನ್ನು ತಿಳಿದುಕೊಂಡ ನಂತರ ಈ ಪುಸ್ತಕದ ರಚನೆಗೆ ಸ್ಫೂರ್ತಿ ದೊರೆಯಿತು.

ಶ್ರೀ ರಾಮಾನುಜಾಚಾರ್ಯರು ತಮ್ಮ ಗುರುಗಳಾದ ನಂಬಿಯವರ ಹತ್ತಿರ 'ಓಂ ನಮೋ ನಾರಾಯಣಾಯ' ಎಂಬ ದಿವ್ಯವಾದ ಅಷ್ಟಾಕ್ಷರ ಮಂತ್ರೋಪದೇಶ ಪಡೆದು ಬೇರೆಯವರಿಗೆ ಉಪದೇಶ ಮಾಡುವುದಿಲ್ಲವೆಂದು ಭಾಷೆ ಕೊಟ್ಟರೂ ಸಹ ದೇಗುಲದ ಗೋಪುರದ ಮೇಲ್ಭಾಗಕ್ಕೆ ತೆರಳಿ ಊರಿನ ಜನರೆಲ್ಲರನ್ನೂ ಕರೆದು ಆ ಪವಿತ್ರವಾದ ಅಷ್ಟಾಕ್ಷರ ಮಂತ್ರವನ್ನು ಹೇಳಿರುತ್ತಾರೆ. ಆಗ ವಿಷಯವನ್ನರಿತ ಗುರುಗಳು ಏಕೆ ಹೀಗೆ ಮಾಡಿದೆಯೆಂದು ಕೇಳಿದಾಗ ರಾಮಾನುಜರು 'ನಾನೊಬ್ಬ ನರಕಕ್ಕೆ ಹೋದರೂ ಪರವಾಗಿಲ್ಲ, ಊರಿನ ಜನರೆಲ್ಲರೂ ಮೋಕ್ಷ ಪಡೆಯುತ್ತಾರಲ್ಲವೇ' ಎಂದು ಹೇಳಿದರಂತೆ.

ಈ ಮೇಲಿನ ಘಟನೆಯಿಂದ ಪ್ರಭಾವಿತನಾದ ನಾವು ನಮ್ಮ ಪರಿಮಿತಿಯಲ್ಲಿ ಸಮಾಜಕ್ಕೆ ಏನಾದರೂ ಒಂದು ಕೊಡುಗೆ ನೀಡಬೇಕೆಂಬ ಮಹದಾಸೆಯು ಮೂಡಿ ಸಮಾಜದ ಎಲ್ಲಾ ಸಮುದಾಯದ ಪ್ರವಾಸಿಗರನ್ನು 2004 ರಿಂದ ಈ 108 ದಿವ್ಯದೇಶಗಳ ಐತಿಹಾಸಿಕ ದರ್ಶನಕ್ಕೆ ಕರೆದುಕೊಂಡು ಹೋಗುತ್ತಿದ್ದೇವೆ. ಈ ದಿವ್ಯದೇಶಗಳ ದರ್ಶನ ಭಾಗ್ಯವು ಪುಣ್ಯದ ಫಲವಿದ್ದರೆ ಮಾತ್ರ ಲಭಿಸುವುದು. ಈ ಪುಸ್ತಕವನ್ನು ಹೊರತರಲು ಪರೋಕ್ಷವಾಗಿ ಅಪರೋಕ್ಷವಾಗಿ ಸಹಕರಿಸಿರುವ ಎಲ್ಲರಿಗೂ ನಮ್ಮ ವಂದನೆಗಳು.

ಎಲ್ಲರೂ ಈ ನೂರೆಂಟು ದಿವ್ಯದೇಶ ಯಾತ್ರೆ ಮಾಡಿ ಅಷ್ಟೈಶ್ವರ್ಯ, ಆರೋಗ್ಯ ಭಾಗ್ಯವನ್ನು ಪಡೆದು ಜನನ ಮರಣಗಳಿಂದ ಮುಕ್ತಿಹೊಂದಿ ಶ್ರೀ ಮಹಾ ವಿಷ್ಣುವಿನ ಪಾದಕಮಲಗಳಲ್ಲಿ ಲೀನವಾಗೋಣ ಎಂದು ಅಪೇಕ್ಷಿಸುತ್ತೇವೆ.

ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿಗಳು

ಆರ್. ಗಾಂಧಿ ಮತ್ತು ವನಜಾ ಗಾಂಧಿ

# ಮುನ್ನುಡಿ



ಹನ್ನೆರಡು ಆಳ್ವಾರ್‌ಗಳ ಮಹಾತ್ಮೆ ಪುಸ್ತಕವನ್ನು ಆರ್. ಗಾಂಧಿರವರು ಹೊರ ತರುತ್ತಿರುವುದು ಹೆಮ್ಮೆಯ ವಿಷಯವಾಗಿದೆ. ಈ ಹನ್ನೆರಡು ಆಳ್ವಾರ್‌ಗಳ ಮಹಾತ್ಮೆ ಎಂಬ ಕಿರು ಹೊತ್ತಿಗೆಯನ್ನು ದೇಶದ ವಿವಿದೆಡೆ ವಿಷ್ಣು ದೇವಾಲಯಗಳಿಗೆ ಭೇಟಿ ನೀಡಿ, ಆ ಪ್ರದೇಶಗಳು ಮತ್ತು ದೇವಾಲಯಗಳ ಪ್ರಭಾವವನ್ನು ಹಾಗೂ ಪರಿಚಯವನ್ನು ಸಂಪೂರ್ಣವಾಗಿ ಗ್ರಹಿಸಿ, ಆ ದೇವಾಲಯಗಳ ಮಹತ್ವವನ್ನು ಜಗತ್ತಿಗೆ ಸಾರುವಲ್ಲಿ ಯಶಸ್ವಿಯಾಗಿದ್ದಾರೆ. ಈ 108 ದಿವ್ಯ ಕ್ಷೇತ್ರ ವೈಭವವು ದೇಶದ ವಿವಿಧ ಸಾಂಪ್ರದಾಯಗಳನ್ನು ಜನತೆಗೆ ಸಾರುವ ಉದ್ದೇಶ ಹೊಂದಿದೆ. ಮುಕ್ತಿನಾಥ ದೇವಾಲಯವು ನೇಪಾಳದಲ್ಲಿರುವುದು ಎಷ್ಟೋ ಜನರಿಗೆ ತಿಳಿಯದೇ ಈ ಪುಸ್ತಕದಿಂದ ತಿಳಿಯುತ್ತಿದೆ. ವೈಷ್ಣವ ಸಂಪ್ರದಾಯದವರು ಮತ್ತು ಇತರರು ಈ 108 ದಿವ್ಯ ದೇಶಗಳ ದರ್ಶನ ಪಡೆದಲ್ಲಿ ಅತ್ಯಂತ ಪುಣ್ಯವನ್ನು ಪಡೆಯುತ್ತಾರೆ ಎನ್ನುವುದು ಪ್ರತೀತಿ.

ಇವರು ತಮ್ಮ ಪುಸ್ತಕದಲ್ಲಿ ಪ್ರತಿಯೊಂದು ಸ್ಥಳದ ಮಹತ್ವವನ್ನು ತಿಳಿಸಿ ಹಾಗೂ ಆ ಪ್ರದೇಶಗಳನ್ನು ಸಂದರ್ಶಿಸಲು ಮಾರ್ಗದರ್ಶನ ನೀಡಿರುವುದು ಮತ್ತು ಸ್ಥಳ ಮಹಾತ್ಮೆಯನ್ನು ತಿಳಿಸಿರುವುದಲ್ಲದೇ, ಆ ಪ್ರದೇಶಗಳ ದೇವರುಗಳ ಹೆಸರುಗಳ ಜೊತೆಗೆ ಸಂಪೂರ್ಣ ವಿವರಗಳನ್ನು ತಿಳಿಸಲು ತುಂಬಾ ಶ್ರಮಿಸಿದ್ದಾರೆ. ಈ ಪುಸ್ತಕವು ಎಲ್ಲಾ ಪ್ರವಾಸಿಗರಿಗೆ ಮಾರ್ಗದರ್ಶನ ನೀಡುವುದಲ್ಲದೇ ಮತ್ತು ಪ್ರವಾಸಿಗರಿಗೆ ಈ ಸ್ಥಳಗಳ ಮಹತ್ವವನ್ನು ತಿಳಿಸುವಲ್ಲಿ ಅತ್ಯಂತ ಉಪಯುಕ್ತವಾಗಲಿದೆ.

ಆರ್ ಗಾಂಧಿರವರು ಈ ಪುಸ್ತಕವನ್ನು ವಾಣಿಜ್ಯ ದೃಷ್ಟಿಯಿಂದ ಹೊರತರದೇ, ಅತ್ಯಂತ ಭಕ್ತಿಭಾವದಿಂದ ಸಮಾಜ ಸೇವೆಯ ಮೂಲ ಉದ್ದೇಶದಿಂದ ಹೊರತರುತ್ತಿದ್ದಾರೆ. ಅವರ ಶ್ರಮ ಸಾರ್ಥಕ ಎನ್ನುವ ರೀತಿಯಲ್ಲಿ ಪುಸ್ತಕವು ಮೂಡಿಬಂದಿದೆ. ಇಂಥಹ 108 ಪುಣ್ಯ ಕ್ಷೇತ್ರಗಳ ದರ್ಶನವನ್ನು ಪುಸ್ತಕದ ರೂಪದಲ್ಲಿ ಹೊರ ತರುತ್ತಿರುವ ತಮಗೆ ಅನಂತ ಅನಂತ ಧನ್ಯವಾದಗಳು. ಐತಿಹಾಸಿಕ ದೇವಾಲಯಗಳ ಪ್ರವಾಸವನ್ನು ಏರ್ಪಡಿಸುವ ನಮ್ಮ ಕಾರ್ಯವು ಬಹಳ ಮಹತ್ವಪೂರ್ಣವಾದುದು ಎಂದು ತಿಳಿಸುತ್ತಾ, ತಮಗೆ ಮಹಾನ್ ವಿಷ್ಣುವು ಆಯುರಾರೋಗ್ಯ ಅಷ್ಟೈಶ್ವರ್ಯಗಳನ್ನು ದಯಪಾಲಿಸಲಿ ಎಂದು ಭಗವಂತನಲ್ಲಿ ಪ್ರಾರ್ಥಿಸುತ್ತಾ, ನಮ್ಮ ಕಾರ್ಯವು ಯಶಸ್ವಿಯಾಗಲಿ ಎಂದು ಹಾರೈಸುತ್ತೇನೆ.

ಸಿ ಆರ್ ಜನಾರ್ಧನ
ಅಧ್ಯಕ್ಷರು, ಎಫ್.ಕೆ.ಸಿ.ಸಿ.ಐ.

# ಪುಸ್ತಕ ಪರಿಚಯ



'ಆಳ್ವಾರ್' ಎಂಬ ಶಬ್ದಕ್ಕೆ 'ಮುಳುಗುವವರು', 'ಆಳುವವರು' ಎಂಬ ಅರ್ಥಗಳಿವೆ. ಭಗವಂತನ ಪ್ರೀತಿಯಲ್ಲಿ ಮುಳುಗುವವರೂ, ತಮ್ಮ ದಯೆ ಹಾಗೂ ಕೃಪೆಯಿಂದ ಭಕ್ತರ ಮನಸ್ಸನ್ನು ಆಳುವವರೂ ಎಂಬುದು ಇದರ ಮರ್ಮ. ದೇವರ ಮಹಿಮೆಯನ್ನು ಅನುಭವಿಸಿ, ಆತನ ಹಿರಿಮೆಯನ್ನು ಸ್ತುತಿಸಿ ದೇವಪಥದಲ್ಲಿ ಇರುವವರ ಹೃದಯಗಳನ್ನು ಸೂರೆಗೊಂಡವರು ಆಳ್ವಾರರುಗಳು.

ಹನ್ನೆರಡು ಆಳ್ವಾರರುಗಳಿದ್ದಾರೆ. ಇವರಲ್ಲಿ ಜಾತಿ, ಮತ, ಕುಲ, ಹೆಣ್ಣು-ಗಂಡೆಂಬ ಭೇದವಿಲ್ಲ. ಇವರೆಲ್ಲರೂ ಪೂಜ್ಯರು. ಇವರ ವಿಗ್ರಹಗಳನ್ನು ಶ್ರೀವೈಷ್ಣವ ದೇವಾಲಯಗಳಲ್ಲಿ ಪ್ರತಿಷ್ಠಾಪಿಸಿ, ಇಂದಿಗೂ ಪೂಜೆ ಮಾಡುತ್ತಾರೆ.

ಇಂಥ ದಿವ್ಯ ಆಳ್ವಾರರುಗಳು ಹಾಡಿ ಹೊಗಳಿದ ಕ್ಷೇತ್ರಗಳು ಪುಣ್ಯಧಾಮಗಳು. ಆಳ್ವಾರರುಗಳನ್ನು ಮುಂದಿರಿಸಿಕೊಂಡು ತೀರ್ಥಯಾತ್ರೆ ಮಾಡುವುದು ಕೇವಲ ಪ್ರವಾಸ ಆಗಿರದೆ, ಇದೊಂದು ಭಕ್ತಿಯಜ್ಞ, ಜ್ಞಾನಯಜ್ಞ ಆಗಿದೆ. ಈ ಯಜ್ಞ ಕಾರ್ಯಕ್ಕೆ ಪ್ರೇರಣೆ ನೀಡುವ ದಿಶೆಯಲ್ಲಿನ ಒಂದು ಮಹಾಪ್ರಯತ್ನವೇ ಶ್ರೀ ಆರ್.ಗಾಂಧಿ ಅವರ ಪ್ರಸ್ತುತ **'ಹನ್ನೆರಡು ಆಳ್ವಾರರುಗಳ ಮಹಾತ್ಮೆ ಮತ್ತು ೧೦೮ ದಿವ್ಯದೇಶ ವೈಭವ'** ಗ್ರಂಥ. ಈ ಸತ್ಕಾರ್ಯ ಮಾಡಲು ಶ್ರೀ ಗಾಂಧಿ ಅವರಿಗೆ ದೇವರೇ ಪ್ರೇರಣೆ ನೀಡಿರಬಲ್ಲ ಎಂಬುದರಲ್ಲಿ ಸಂಶಯವಿಲ್ಲ.

ಸುಮ್ಮನೇ ಮಾಡುವ ಭಕ್ತಿಗಿಂತ ಅರಿತು ಬೆಳೆಸಿಕೊಳ್ಳುವ ಭಕ್ತಿಯಲ್ಲಿ ನೂರು ಪಟ್ಟು ಶಕ್ತಿ ಇರುತ್ತದೆಂಬುದು ಅನುಭಾವಿಗಳ ನುಡಿ. ದಿವ್ಯ ದೇಶಗಳನ್ನು ತಿಳಿದು, ಆಳ್ವಾರರುಗಳ ಮಹಿಮೆಯನ್ನು ಅರಿತು ಕ್ಷೇತ್ರದರ್ಶನ ಮಾಡಲು ಪ್ರಸ್ತುತ ಗ್ರಂಥ ಇಂಬು ನೀಡುತ್ತದೆ.

ಆರಂಭದಲ್ಲಿ ಆಳ್ವಾರರುಗಳ ವೈಭವವನ್ನು ವರ್ಣಿಸಿ, ತದನಂತರ ೧೦೮ ದಿವ್ಯದೇಶ (ತೀರ್ಥಕ್ಷೇತ್ರ)ಗಳ ಪರಿಚಯ ನೀಡಿರುವುದು ತುಂಬ ವ್ಯವಸ್ಥಿತವಾಗಿದೆ. ಸರಳ ಭಾಷೆ, ನೇರ ನಿರೂಪಣೆ ಹಾಗೂ ಅಗತ್ಯ ಮಾಹಿತಿಗಳ ತ್ರಿವೇಣಿ ಸಂಗಮವಾಗಿದೆ ಈ ಗ್ರಂಥ. ಒಂದು ಪ್ರವಾಸೀ ಮಾಹಿತಿ ಗ್ರಂಥದ ರೂಪದಲ್ಲೂ ಕ್ಷೇತ್ರ ಮಹಿಮೆ ಅರಿಯಬಯಸುವ ಅಧ್ಯಾತ್ಮ ಪಿಪಾಸುಗಳ ಜ್ಞಾನ ದಾಹ ತೀರಿಸುವ ಗ್ರಂಥದ ರೂಪದಲ್ಲೂ ಈ ಗ್ರಂಥ ಮೂಡಿಬಂದಿದೆ ಎಂಬುದಾಗಿ ಅಭಿಪ್ರಾಯ ಪಡುತ್ತೇನೆ.

ದೇವರ ಸಾಮೀಪ್ಯ ಸಾಧಿಸಲು, ಹೃದಯ, ಮನಸ್ಸುಗಳನೆಲ್ಲ ದೇವರ ಸ್ಮರಣೆಯಲ್ಲಿಯೇ ನಿಲ್ಲಿಸಲು ನಾಮಸ್ಮರಣೆ ಬಹುಮುಖ್ಯ. ಇದಕ್ಕಾಗಿ ಸ್ತೋತ್ರ, ಅಷ್ಟೋತ್ತರ, ನಾಮಾವಳಿ ಇತ್ಯಾದಿ ಸಾಧನಗಳಾಗಿವೆ. ಇಂಥವುಗಳನ್ನು ಧಾರಾಳವಾಗಿ ಕಲೆಹಾಕಿ ಗ್ರಂಥದಲ್ಲಿ ಸೇರಿಸಿ ಭಕ್ತರು, ಯಾತ್ರಾರ್ಥಿಗಳು ಪುಸ್ತಕವನ್ನು ಸದಾ ಸಂಗಾತಿಯಾಗಿರಿಸಿಕೊಳ್ಳುವಂತೆ ಮಾಡುವಲ್ಲಿ ಶ್ರೀ ಗಾಂಧಿಯವರು ಯಶಸ್ವಿಯಾಗಿದ್ದಾರೆ. ಪುಸ್ತಕದ ಕೊನೆಯ ಭಾಗದಲ್ಲಿರುವ ಕ್ಷೇತ್ರದೇವತೆಗಳ ಫೋಟೋಗಳು ದೇವದರ್ಶನದ ಮುಂಚೆಯೂ ದರ್ಶನಾನಂತರವೂ ವಿಶಿಷ್ಟ ರೀತಿಯಲ್ಲಿ ಅನುಗ್ರಹ ನೀಡುವಂತಿವೆ. ಶ್ರಮವಹಿಸಿ ಇವುಗಳನ್ನೆಲ್ಲ ಗ್ರಂಥದಲ್ಲಿ ಜೋಡಿಸಿದ್ದು, ಗ್ರಂಥಕರ್ತರ ಉತ್ಸಾಹಕ್ಕೆ ಸಾಕ್ಷಿಯಾಗಿದೆ.

ಸದ್ಭಕ್ತರ ಪ್ರಯೋಜನಕ್ಕಾಗಿ ಸಿದ್ಧಗೊಂಡ ಪ್ರಸ್ತುತ ಗ್ರಂಥ ಓದುಗರಿಗೆಲ್ಲ ಹಲವು ರೀತಿಯಲ್ಲಿ ಪ್ರಯೋಜನಕರವಾಗಿದೆ. ಇಂಥ ಒಂದು ಗಹನ ಕಾರ್ಯ ಮಾಡಿದ ಶ್ರೀ ಗಾಂಧಿ ಅವರಿಗೆ ಅಭಿನಂದನೆಗಳನ್ನೂ ಧನ್ಯವಾದಗಳನ್ನೂ ಸಲ್ಲಿಸುತ್ತೇನೆ.

- ಶುಭಂ -

ಡಾ|| ರ.ವಿ. ಜಹಾಗೀರದಾರ
ಮ್ಯಾನೇಜಿಂಗ್ ಟ್ರಸ್ಟಿ
ಸಾಕ್ಷಿ ಟ್ರಸ್ಟ್



## ಈ ಹೊತ್ತಿಗೆಯನ್ನು ಕುರಿತು

ಆರ್. ಗಾಂಧಿ ಅವರ ಪರಿಚಯ ನನಗೆ ಕಳೆದ ಮೂವತ್ತು ವರ್ಷಗಳಿಂದಲೂ ಇದೆ. ಅವರು ಬಹಳ ಶ್ರಮಜೀವಿ. ಅವರು ಮಾಡಿರುವ ಕೆಲಸಗಳು ಬಹಳ. ಗಂಡು–ಹೆಣ್ಣುಗಳ ಜಾತಕಗಳನ್ನು ಹೊಂದಿಸಿ, ಮದುವೆ ಮಾಡಿಸುವ, ಮದುವೆ ಮಂಟಪದಲ್ಲಿ ಅಲಂಕಾರ ಮಾಡುವ ಕೆಲಸಗಳನ್ನು ಮಾಡುತ್ತಿದ್ದರು. ಆ ಸಮಯದಲ್ಲಿ ಅನೇಕ ಸಂದರ್ಭಗಳಲ್ಲಿ ಹಣವನ್ನೇ ತೆಗೆದುಕೊಳ್ಳದೆ ಅನೇಕ ಬಡ ಕನ್ಯಾಪಿತೃಗಳಿಗೆ ಸಹಾಯ ಮಾಡಿದ್ದಾರೆ. ಅವರ ಸಮಾಜ ಸೇವೆ ಬಹಳ ಅನನ್ಯವಾದುದು. ತನ್ನ ಬಳಿ ಯಾವುದೇ ಸೌಲಭ್ಯಗಳಿಲ್ಲದಿದ್ದರೂ ಪ್ರಾಯೋಜಕರನ್ನು ಸಂಪರ್ಕಿಸಿ ಬಹಳ ಮದುವೆಗಳನ್ನು ಮಾಡಿಸಿದ್ದಾರೆ. ಅವರನ್ನು ಈಗಲೂ ಬಹಳ ಜನ ಸ್ತುತಿಸುತ್ತಿದ್ದಾರೆ.

ಆನಂತರ ಗಾಂಧಿಯವರು ಪ್ರವಾಸೋದ್ಯಮವನ್ನು ಪ್ರಾರಂಭಿಸಿದರು. ಪ್ರಾರಂಭದ ಹಂತದಲ್ಲಿ ಅನೇಕ ಎಡರುತೊಡರುಗಳನ್ನು ಎದುರಿಸಿ ಬೇರೆಲ್ಲ ಪ್ರವಾಸೋದ್ಯಮದವರು ಮಾಡುವ ರೀತಿಯಲ್ಲಿ ಇವರು ಪ್ರವಾಸಗಳ ಆಯೋಜನೆಯನ್ನು ಮಾಡದೆ, ಯಾರೂ ಕಂಡರಿಯದ, ನೋಡಿರದ, ಐತಿಹಾಸಿಕ, ಚಾರಿತ್ರಿಕ ಸ್ಥಳಗಳನ್ನು ದರ್ಶಿಸಿ, ಆ ಕ್ಷೇತ್ರಗಳ ಮಹಿಮೆಯನ್ನು ಅರಿತು ಆ ಸ್ಥಳಗಳನ್ನು ಜನರಿಗೆ ತೋರಿಸಬೇಕೆನ್ನುವ ನಿಟ್ಟಿನಲ್ಲಿ ಬಹಳ ಶ್ರಮವಹಿಸಿದ್ದಾರೆ.

ಪ್ರಸ್ತುತ ಗಾಂಧಿಯವರು ಚಾರಿತ್ರಿಕ ದೇವಾಲಯಗಳ ಆಯೋಜಕರಾಗಿದ್ದು 108 ದಿವ್ಯ ದೇಶಗಳು, 108 ಶಿವಾಲಯಗಳು, 36 ಸುಬ್ರಮಣ್ಯ ದೇಗುಲಗಳು, 27 ಕಾಲಭೈರವ ದೇಗುಲಗಳು, ಕಾಶಿಯಲ್ಲಿ 56 ಚಾರಿತ್ರಿಕ ಗಣೇಶ ದೇಗುಲಗಳು ಹೀಗೆ ಇವರ ಪಟ್ಟಿ ಬೆಳೆಯುತ್ತಲೇ ಇರುತ್ತದೆ.

ಒಮ್ಮೆ ಗಾಂಧಿಯವರು ನನ್ನ ಬಳಿ ಬಂದು 108 ದಿವ್ಯ ಕ್ಷೇತ್ರಗಳ ಬಗ್ಗೆ ತಿಳಿಸಿದರು. ನಾನು ಆ ಕ್ಷೇತ್ರಗಳ ಪರಿಚಯವನ್ನು ಪುಸ್ತಕ ರೂಪದಲ್ಲಿ ಕೊಟ್ಟರೆ ಪ್ರವಾಸಿಗರಿಗೆ ಅನೇಕ ವಿಷಯಗಳು ಅಚ್ಚಳಿಯದೆ ಉಳಿಯುತ್ತದೆ. ಕ್ಷೇತ್ರ ಪರಿಚಯ ಬಹಳ ಚೆನ್ನಾಗಿ ಆಗುತ್ತದೆ. ಈ ಪುಸ್ತಕವನ್ನು ಮಾರ್ಗದರ್ಶಕ ಪುಸ್ತಕವನ್ನಾಗಿಯೂ ಬಳಸಿಕೊಳ್ಳುತ್ತಾರೆ ಎಂದು ತಿಳಿಸಿದೆ. ಆಗ ಅವರು ಆ ವಿಷಯವನ್ನು ಸಕಾರಾತ್ಮಕವಾಗಿ ತೆಗೆದುಕೊಂಡು ಬಹಳ ಪುಸ್ತಕಗಳನ್ನು ಓದಿ ಆ ಕ್ಷೇತ್ರಗಳಲ್ಲಿ ಸಿಗುವ ಮಾಹಿತಿಯನ್ನು ಕಲೆಹಾಕಿ ನನ್ನ ಬಳಿ ನೀಡಿದರು. ನಾನು ಅವರು ಹೇಳಿರುವ ಮಾಹಿತಿಯನ್ನು ಮತ್ತು ಕೆಲವು ಗ್ರಂಥಗಳ ಆಧಾರದ ಮೂಲಕ ಈ ಪುಸ್ತಕವನ್ನು ರಚಿಸಿದ್ದೇನೆ. ನಾನು ಈ ಪುಸ್ತಕವನ್ನು ಬರೆಯುತ್ತಾ ಹೋದಂತೆ 108 ದಿವ್ಯಕ್ಷೇತ್ರಗಳ ಮಹಿಮೆಯನ್ನು ನಾನೂ ಅರಿತುಕೊಂಡೆ. ಕೆಲವು ಕ್ಷೇತ್ರಗಳು ಇದುವರೆವಿಗೂ ಮುಖ್ಯವಾಹಿನಿಗೆ ಬರದಿರುವುದು ದುರದೃಷ್ಟಕರ. ಅಂತಹ ಪುಣ್ಯ ಕ್ಷೇತ್ರಗಳನ್ನು ಗಾಂಧಿಯವರು ಬೆಳಕಿಗೆ ತರುವ ಉದ್ದೇಶದಿಂದ ಎಲ್ಲಾ 108 ದಿವ್ಯದೇಶಗಳನ್ನು ಪ್ರವಾಸಿಗರಿಗೆ ಪರಿಚಯ ಮಾಡಿಕೊಡುತ್ತಿದ್ದಾರೆ.

ಈ ಪುಸ್ತಕವನ್ನು ರಚಿಸಲು ಅವಕಾಶಮಾಡಿಕೊಟ್ಟ ಆರ್. ಗಾಂಧಿಯವರಿಗೆ ನನ್ನ ಅನಂತಾನಂತ ಪ್ರಣಾಮಗಳು. ಕೇವಲ ವ್ಯಾಪಾರ ಉದ್ದೇಶವನ್ನಿಟ್ಟುಕೊಳ್ಳದೆ ಸಮಾಜಸೇವೆ ಮಾಡುತ್ತಿರುವ ಆರ್. ಗಾಂಧಿಯವರಿಗೆ ಭಗವಾನ್ ಮಹಾವಿಷ್ಣುವು ಸಕಲ ಅಷ್ಟೈಶ್ವರ್ಯ, ಆರೋಗ್ಯಭಾಗ್ಯ ನೀಡಲಿ ಎಂದು ಪ್ರಾರ್ಥಿಸಿಕೊಳ್ಳುತ್ತೇನೆ.

ವಿ. ರಾಘವೇಂದ್ರ
ಮಾತೃಶ್ರೀ ಗ್ರಾಫಿಕ್ಸ್
ತ್ಯಾಗರಾಜನಗರ, ಬೆಂಗಳೂರು
ಮೊ: 94490 00155



॥ ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ
ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ ॥

ವೃತ್ತಿಯಲ್ಲಿ ವೈದ್ಯನಾದ ನಾನು ಇಸ್ಕಾನ್ ಅನುಯಾಯಿ. ಗಾಂಧಿ ಟೂರ್ಸ್‌ನ ಮುಖಾಂತರ 108 ದಿವ್ಯ ದೇಶ ಯಾತ್ರೆಗೆ ತೆರಳಿದ್ದು ಮತ್ತೊಮ್ಮೆ ನೋಡಬೇಕೆಂಬ ಆಸೆಯಿಂದ ಮೂರು ಬಾರಿ ಯಾತ್ರೆ ಮಾಡಿದ್ದೇನೆ.

ದಿವ್ಯ ದೇಶ ಯಾತ್ರೆ ನನ್ನ ಜೀವನದಲ್ಲಿ ಮರೆಯಲಾಗದ ಕ್ಷಣಗಳನ್ನು ಹುಟ್ಟಿಸಿದೆ. ಕೆಲವು ಕ್ಷೇತ್ರಗಳಲ್ಲಿ ಸಾರಿಗೆ ವ್ಯವಸ್ಥೆಯೂ ಸರಿಯಾಗಿಲ್ಲ. ಆದರೂ ಇವರು ಎಲ್ಲ ಕ್ಷೇತ್ರಗಳನ್ನೂ ಬಹಳ ಚೆನ್ನಾಗಿ ಕ್ಷೇತ್ರ ವಿವರಣೆ ಮಾಡುತ್ತಾ ದೇವರ ಮಹಿಮೆಯನ್ನು ಕೊಂಡಾಡುತ್ತಾ ಸ್ವಾಮಿಯ ದರ್ಶನ ಮಾಡಿಸುತ್ತಾರೆ.

ದೇವರು ಪ್ರತಿಯೊಬ್ಬರನ್ನೂ ಒಂದೊಂದು ಕಾರಣದಿಂದ ಹುಟ್ಟಿಸಿರುತ್ತಾರೆ. ಗಾಂಧಿಯವರ ಹುಟ್ಟು ಕೇವಲ ಈ 108 ದಿವ್ಯ ದೇಶಗಳನ್ನು ದರ್ಶನ ಮಾಡಿಸುವುದಕ್ಕಾಗಿಯೇ ಆಗಿದೆಯೇನೋ ಎಂದು ಭಾಸವಾಗುತ್ತದೆ. ಅನೇಕ ಕ್ಷೇತ್ರಗಳಲ್ಲಿ ಯಾವುದೇ ಸಾರಿಗೆ ವ್ಯವಸ್ಥೆ, ವಸತಿ ವ್ಯವಸ್ಥೆ ಇಲ್ಲದಿದ್ದರೂ ಆ ಕ್ಷೇತ್ರಗಳ ದರ್ಶನವನ್ನು ಮಾಡಿಸಿದ್ದಾರೆ. ಆ ಕ್ಷೇತ್ರಗಳ ಮಹಿಮೆ ಅಪಾರವಾದದ್ದು. ಬೇರಾರೂ ಮಾಡಲು ಸಾಧ್ಯವಾಗದಿರುವ ಈ ಕಾರ್ಯವನ್ನು ಗಾಂಧಿಯವರು ಮಾಡುತ್ತಿರುವುದು ದೇವರ ಅನುಗ್ರಹ. ಇವರ ಜೊತೆಗೆ ನಾನು ಮೂರು ಬಾರಿ ಕ್ಷೇತ್ರ ದರ್ಶನ ಮಾಡಿರುವುದು ನನ್ನ ಪೂರ್ವ ಜನ್ಮದ ಪುಣ್ಯದ ಫಲವೆಂದೇ ಭಾವಿಸುತ್ತೇನೆ.

ಡಾ. ಕೆ.ಎಲ್. ನಾಗರಾಜ್
ಬಿ.ಎಸ್.ಸಿ., ಎಂ.ಬಿ.ಬಿ.ಎಸ್., ಎಂ.ಡಿ.
ಎಂ.ಎಸ್.ಆರ್. ಲೇ ಔಟ್, ಬೆಂಗಳೂರು



ಶ್ರೀ ಗುರುಭ್ಯೋ ನಮಃ
ಶ್ರೀಮತೇ ರಾಮಾನುಜಾಯ ನಮಃ
108 ಶ್ರೀ ವೈಷ್ಣವ ದಿವ್ಯ ಕ್ಷೇತ್ರ ದರ್ಶನಂ

**ಕೋಟಿ ಜನ್ಮಗಳ ಪುಣ್ಯಫಲಂ**
**ದಿವ್ಯಕ್ಷೇತ್ರ ದೇವದರ್ಶನಂ**
**ಮಹಾಭಾಗ್ಯಂ ಮಹಾಪುಣ್ಯಂ**
**ಮಹಾಫಲಥಂ ಜನ್ಮಮೋಕ್ಷಂ**
**ಸಪ್ತಜನ್ಮಪಾಪಹರಣಂ**
**ಸಕಲಂಸೌಭಾಗ್ಯಂ**
**ಶ್ರೀ ಶ್ರೀದಿವ್ಯದೇಶದರ್ಶನಂ**

**ಓಂ ನಮೋ ಭಗವತೇ ವಾಸುದೇವಾಯ ನಮಃ**
**ಶ್ರೀ ಲಕ್ಷ್ಮೀನೃಸಿಂಹಸ್ವಾಮೀ ಅನುಗ್ರಹಾಯನಮಃ**

ವೇದದ ಪ್ರಕಾರ 9 ಭಕ್ತ ಮಾರ್ಗಗಳುಂಟು. ಶ್ರವಣಂ, ಕೀರ್ತನಂ, ವಿಷ್ಣುಹು, ಸ್ಮರಣಂ, ಪಾದಸೇವನಂ, ಅರ್ಚನಂ, ವಂದನಂ, ಸಖ್ಯಿತ್, ಆತ್ಮನಿವೇದನಂ

ಕಲಿಯುಗದಲ್ಲಿ ಈ 9 ಭಕ್ತಿಮಾರ್ಗಗಳಲ್ಲಿ ದೇವರನ್ನು ಸೇವಿಸಬಹುದು. ಭಗವದಾರಾಧನೆಯನ್ನು ಭಕ್ತಿಮಾರ್ಗದಲ್ಲಿ ಸೇರಿ ಭಗವದನುಗ್ರಹವನ್ನು ಪಡೆಯಬಹುದು.

ಶ್ರೀವೈಷ್ಣವನಾದ ನಾನು ಈ 108 ದಿವ್ಯಕ್ಷೇತ್ರಗಳನ್ನು ನೋಡಲಾಗಿರಲಿಲ್ಲ. ಗಾಂಧಿಯವರ ಜೊತೆ ಪಯಣಿಸಿ ಶ್ರೀವೈಕುಂಠಂನಲ್ಲಿ ಕಲ್ಯಾಣೋತ್ಸವವನ್ನು ಸಹ ಮಾಡಿದ್ದೇನೆ. ನಮ್ಮ ಕುಟುಂಬ ಸಮೇತ ಬಂಧುಗಳಾದ ನರಸಿಂಹಾಚಾರ್, ತಿರುಪತಿಯಿಂದ ಕೆ. ರಾಮು ಮತ್ತಿತರರು ಕಲ್ಯಾಣೋತ್ಸವದಲ್ಲಿ ಭಾಗವಹಿಸಿದ್ದರು. ಈ ಕಾರ್ಯಕ್ಕೆ ಸಹಕಾರ ನೀಡಿದ ಗಾಂಧಿಯವರಿಗೆ ಅನಂತ ವಂದನೆಗಳು.

ಪಿ.ಎಸ್.ಸಿ. ಚಕ್ರವರ್ತಿ ಆಚಾರ್
**ಮದನಪಲ್ಲಿ, ಎ.ಪಿ.**

# ಒಳಪುಟಗಳಲ್ಲಿ

ನಡುನಾಡು (ಮಧ್ಯನಾಡು) ದಿವ್ಯದೇಶಗಳು



ತೊಂಡನಾಡಿನ ದಿವ್ಯಕ್ಷೇತ್ರಗಳು

# 12 ಆಳ್ವಾರ್‌ಗಳ ಕಿರುಪರಿಚಯ



ಪೊಯ್‌ಗೈಯ್ ಆಳ್ವಾರ್ | ಬೂದತ್ತಾಳ್ವಾರ್ | ಪೇಯ್ ಆಳ್ವಾರ್ | ತಿರುಮಳಿಸೈ ಆಳ್ವಾರ್ | ಮಧುರಕವಿ ಆಳ್ವಾರ್ | ನಮ್ಮಾಳ್ವಾರ್

| | | |
|---|---|---|
| 1. ಪೊಯ್‌ಗೈಯ್ ಆಳ್ವಾರ್ | ಶಂಕು | ತಿರುವೆಕ್ಕಾ |
| 2. ಬೂದತ್ತಾಳ್ವಾರ್ | ಗಧೆ | ತಿರುಕಡಲ್‌ಮಲ್ಲೈ |
| 3. ಪೇಯ್ ಆಳ್ವಾರ್ | ಖಡ್ಗ | ಮೈಲಾಪುರ್ |
| 4. ತಿರುಮಳಿಸೈ ಆಳ್ವಾರ್ | ಚಕ್ರ | ತಿರುಮಳಿಸೈ |
| 5. ಮಧುರಕವಿ ಆಳ್ವಾರ್ | ನಿತ್ಯಸೂರಿ | ತಿರುಕ್ಕೋಲೂರ್ |
| 6. ನಮ್ಮಾಳ್ವಾರ್ | ವಿಶ್ವಸೇನ | ಆಳ್ವಾರ್‌ತಿರುನಗರ್ |
| 7. ಕುಲಶೇಖರ ಆಳ್ವಾರ್ | ಆಭರಣ | ವಂಜಿಕಳಂ |
| 8. ಪೆರಿಯಾಳ್ವಾರ್ | ಗರುಡ | ಶ್ರೀವಿಲ್ಲಿಪುತ್ತೂರು |
| 9. ಆಂಡಾಳ್ | ಭೂಮಾದೇವಿ | ಶ್ರೀವಿಲ್ಲಿಪುತ್ತೂರು |
| 10. ತೊಂಡರಡಿಪೊಡಿ ಆಳ್ವಾರ್ | ಹೂವಿನ ತೋಮಾಲೆ | ತಿರುಮಂಡಂಗುಡಿ |
| 11. ತಿರುಪ್ಪಾನಾಳ್ವಾರ್ | ಶ್ರೀವಕ್ಷಂ | ಉರೈಯೂರ್ |
| 12. ತಿರುಮಂಗೈ ಆಳ್ವಾರ್ | ಬಿಲ್ಲು | ತಿರುಕ್ಕೊರಯಲೂರ್ |



ಕುಲಶೇಖರ ಆಳ್ವಾರ್ | ಪೆರಿಯಾಳ್ವಾರ್ | ಆಂಡಾಳ್ | ತೊಂಡರಡಿಪೊಡಿ ಆಳ್ವಾರ್ | ತಿರುಪ್ಪಾನಾಳ್ವಾರ್ | ತಿರುಮಂಗೈ ಆಳ್ವಾರ್

# ಹನ್ನೆರಡು ಆಳ್ವಾರರ ವೈಭವ

ಈ ಭುವಿಯಲ್ಲಿ ನಾವು ಯಾರು? ನಾವು ಹೇಗಿರಬೇಕು? ಎಂದು ತಿಳಿಸಲು ಶ್ರೀ ವೈಕುಂಠ ವಾಸ, ಶ್ರೀಮನ್ನಾರಾಯಣ ತನ್ನ ಅಂಶಗಳಿಂದ 12 ಆಳ್ವಾರುಗಳ ಸೃಷ್ಟಿ ಮಾಡಿದರು. ಅವರು ಅಂಗರೂಪ ಮತ್ತು ಆಭರಣಗಳಾದ ಕತ್ತಿ, ಗಧೆ, ಶಂಖ, ಚಕ್ರ ಮುಂತಾದ ಸ್ವರೂಪವೇ ಆಗಿದ್ದಾರೆ.

ಈ ಆಳ್ವಾರರು ಯಾರೆಂದರೆ **1. ಪೊಯ್‌ಗೈ ಆಳ್ವಾರ್, 2. ಬೂತತ್ತಾಳ್ವಾರ್, 3. ಪೇಯ್ ಆಳ್ವಾರ್, 4. ತಿರುಮಳಿಸೈ ಆಳ್ವಾರ್, 5. ನಮ್ಮಾಳ್ವಾರ್, 6. ಮಧುರ ಕವಿ ಆಳ್ವಾರ್, 7. ಕುಲಶೇಖರ ಆಳ್ವಾರ್, 8. ಪೆರಿಯಾಳ್ವಾರ್, 9. ಆಂಡಾಳ್, 10. ತೊಂಡರಡಿಪೊಡಿ ಆಳ್ವಾರ್, 11 ತಿರುಪ್ಪಾನಾಳ್ವಾರ್, 12. ತಿರುಮಂಗೈ ಆಳ್ವಾರ್**

ಈ ಆಳ್ವಾರರ ಸ್ಥೂಲ ಪರಿಚಯ ಮಾಡಿಕೊಳ್ಳೋಣ.

**1. ಪೊಯ್‌ಗೈ ಆಳ್ವಾರ್** :- ಈ ಆಳ್ವಾರರು ಕಾಂಚೀಪುರದ ಬಳಿ ಇರುವ ವೇಗವತಿ ನದಿ ದಡದಲ್ಲಿರುವ ತಿರುವೆಕ್ಕಾ ಎನ್ನುವ ದಿವ್ಯದೇಶದ ಹತ್ತಿರ ಒಂದು ತಾವರೆ ಹೂವಿನ ಕೊಳ(ಪೊಯ್‌ಗೈ)ದಲ್ಲಿ ತಾವರೆಯ ಹೂವಿನಲ್ಲಿ ಜನ್ಮ ತಾಳಿದರು. ಆ ಕಾರಣದಿಂದ ಇವರಿಗೆ ಪೊಯ್‌ಗೈ ಆಳ್ವಾರ್ ಎಂಬ ಹೆಸರು ಬಂದಿತು. ಇವರು ದ್ವಾಪರ ಯುಗದಲ್ಲಿ ಸಿದ್ಧಾರ್ಥಿ ವರ್ಷ, ಆಶ್ವಯುಜ ಮಾಸ, ಶ್ರವಣ ನಕ್ಷತ್ರದಲ್ಲಿ ಶಂಖುವಿನ ಅಂಶದಲ್ಲಿ ಜನಿಸಿದರು.

ಭಗವಂತನ ಕಟಾಕ್ಷ ಹೊಂದಲು ನಮ್ಮ ಕರ್ಮವು ತೊಲಗಬೇಕು. ಕರ್ಮವೇನಾದರೂ ಇದ್ದಲ್ಲಿ ಅನೇಕ ಕಷ್ಟಗಳು ಸಮುದ್ರೋಪಾದಿಯಲ್ಲಿ ಬರುತ್ತಲೇ ಇರುತ್ತವೆ. ಈ ಕರ್ಮಗಳು ಸವೆದಲ್ಲಿ ಮಾತ್ರ ನಮಗೆ ಮೋಕ್ಷ ಪ್ರಾಪ್ತಿಯಾಗುತ್ತದೆ.

ವೈಷ್ಣವ ಸಂಪ್ರದಾಯವನ್ನು ಭೂಮಿ ಇರುವವರೆಗೂ ಸ್ಥಾಪಿಸಲು, ಬೆಳೆಸಲು 4000 ಪ್ರಬಂಧವನ್ನು ಪಠನ ಮಾಡಿ ಸಾಧನೈದರು. ವೈಷ್ಣವ ಸಂಪ್ರದಾಯವನ್ನು ಬೆಳೆಸಲು ಈ ಆಳ್ವಾರರನ್ನು 'ಜ್ಞಾನದೀಪಂ' ಎಂದು ಶ್ರೀ ರಾಮಾನುಜಾಚಾರ್ಯರು ಹೇಳಿದರು.

**ಇವರು ಮಂಗಳ ಶಾಸನ ಮಾಡಿದ ಸ್ಥಳಗಳು :**

**1.ಶ್ರೀವೈಕುಂಠಂ, 2. ಕ್ಷೀರ ಸಮುದ್ರ, 3. ತಿರುಪತಿ (ತಿರುವೇಂಕಟಂ), 4. ಶ್ರೀರಂಗಂ, 5. ತಿರುವಿನ್ನಗರ್, 6. ತಿರುಕ್ಕೋವಲೂರ್, 7. ತಿರುವೆಕ್ಕಾ.**

**2. ಬೂತತ್ತಾಳ್ವಾರ್** : – ಪೊಯ್‌ಗ್ಯೆ ಆಳ್ವಾರರು ಹುಟ್ಟಿದ ಮರುದಿನವೇ ಈ ಆಳ್ವಾರರು ದ್ವಾಪರಯುಗ, ಸಿದ್ಧಾರ್ಥಿ ವರ್ಷ, ಆಶ್ವಯುಜ ಮಾಸ, ಧನಿಷ್ಠಾ ನಕ್ಷತ್ರದಲ್ಲಿ ಶ್ರೀಮನ್ನಾರಾಯಣನ ಗದೆಯ ಅಂಶದಿಂದ ಜನ್ಮಿಸಿದರು.

ಪ್ರೀತಿಯೆಂಬ ಹಣತೆಯಲ್ಲಿ ಪ್ರೇಮವೆಂಬ ತುಪ್ಪ ಹಾಕಿ ಭಕ್ತಿ ಪರವಶ ಎಂಬ ಬತ್ತಿಯಿಂದ ನಾರಾಯಣನೆಂಬ ಜ್ಞಾನ ದೀಪವನ್ನು ಪ್ರಜ್ವಲಿಸಿ ಶ್ರೀಮನ್ನಾರಾಯಣನನ್ನು ಹೊಗಳಿದ ಆಳ್ವಾರ್ ಈ ಬೂತತ್ತಾಳ್ವಾರ್.

ಇವರು ಸದಾಕಾಲ ಮಹಾವಿಷ್ಣುವಿನ ಭಕ್ತಿಯನ್ನು ಬಿಟ್ಟು ಬೇರೇನೂ ಚಿಂತಿಸುತ್ತಿರಲಿಲ್ಲ. ಇವರ ಮಂಗಳಶಾಸನ ಮಾಡಿದ ಹಾಡುಗಳನ್ನು ಕೇಳಿದರೆ ಭಕ್ತಿಯಿಂದ ಕರಗಿ ನೀರಾಗಿ ನಾರಾಯಣನಲ್ಲೇ ಲೀನವಾಗಬಹುದು.

**ಇವರು ಮಂಗಳಶಾಸನ ಮಾಡಿದ ಸ್ಥಳಗಳು :**

**1. ಕ್ಷೀರ ಸಮುದ್ರ, 2. ತಿರುಪತಿ (ತಿರುವೇಂಕಟಂ), 3. ತಿರುಕಡಲ್‌ಮಲ್ಲೈ, 4. ತಿರುನೀರ್‌ಮಲ್ಯೆ, 5. ತಿರುಪಾಡಗಂ, 6. ತಿರುಕ್ಕೋವಲೂರ್, 7. ತಿರುಕಚ್ಚಿ, 8. ತಿರುಮಾಲಿರುಂಸೋಲ್ಯೆ, 9. ತಿರುಕ್ಕೋಟಿಯೂರ್, 10. ತಿರುತಂಗಾಲ್, 11. ತಿರುಕುಡೊಂದ್ಯೆ, 12. ತಿರುತಂಜ್ಯೆ, 13. ತಿರುವರಂಗಂ (ಶ್ರೀರಂಗಂ).**

**3. ಪೇಯ್ ಆಳ್ವಾರ್** :– ಇವರು ಪೊಯ್‌ಗ್ಯೆ ಆಳ್ವಾರರು ಹುಟ್ಟಿದ ಎರಡನೇ ದಿನ ದ್ವಾಪರ ಯುಗ, ಸಿದ್ಧಾರ್ಥಿ ವರ್ಷ, ಆಶ್ವೈಜ ಮಾಸ, ಶತಭಿಷ ನಕ್ಷತ್ರದಲ್ಲಿ  ಖಡ್ಗದ ಅಂಶದಲ್ಲಿ ಜನಿಸಿದರು.

ಇವರು ಚೆನ್ನೈ ಮ್ಯೆಲಾಪುರ್‌ನಲ್ಲಿರುವ ಆದಿಕೇಶವ ಪೆರುಮಾಳ್ ದೇಗುಲದಲ್ಲಿರುವ ಕೊಳದಲ್ಲಿ ಕೆಂದಾವರೆ ಹೂವಿನ ಎಸಳಿನಲ್ಲಿ ಹುಟ್ಟಿದರು.

ಮೇಲ್ಕಂಡ ಮೂವರು ಆಳ್ವಾರರು (ಪೊಯ್‌ಗ್ಯೆ ಆಳ್ವಾರ್, ಬೂತತ್ತಾಳ್ವಾರ್, ಪೇಯ್ ಆಳ್ವಾರ್) ಯಾರ ಗರ್ಭದಲ್ಲೂ ಜನಿಸಿದವರಲ್ಲ.

ತಿರುಕ್ಕೋವಲೂರ್‌ನಲ್ಲಿ ಪೊಯ್‌ಗ್ಯೆ ಆಳ್ವಾರ್ ದೇವರ ದರ್ಶನಕ್ಕಾಗಿ ತೆರಳಿದ್ದರು. ಆ ಸಮಯದಲ್ಲಿ ಮಳೆ ಬಂದಾಗ ಭಾರ್ಗವ ಮಹರ್ಷಿಯ ಆಶ್ರಮದಲ್ಲಿ ಸ್ವಲ್ಪ ಸ್ಥಳ ಕೇಳಿದರು. ಆಗ ಭಾರ್ಗವ ಮಹರ್ಷಿ ಒಬ್ಬರು ಮಲಗುವಷ್ಟು ಜಾಗ ಇದೆ. ಬನ್ನಿ ಎಂದರು. ಅದೇ ಸಮಯದಲ್ಲಿ

ಬೂತತ್ತಾಳ್ವಾರ್‌ರು ಅಲ್ಲಿಗೆ ಆಗಮಿಸಿ ಮಹರ್ಷಿಯ ಬಳಿ ಸ್ಥಳ ಕೇಳಿದರು. ಆಗ ಮಹರ್ಷಿ ಇಬ್ಬರು ಕೂರಬಹುದು ಬನ್ನಿ ಎಂದರು. ಪೇಯ್ ಆಳ್ವಾರರೂ ದರ್ಶನಾರ್ಥವಾಗಿ ಅಲ್ಲಿಗೆ ಬಂದರು. ಮಳೆಯ ಕಾರಣ ಮಹರ್ಷಿಯನ್ನು ಸ್ವಲ್ಪ ಸ್ಥಳ ಕೇಳಿದಾಗ ಮಹರ್ಷಿಯು ಇಬ್ಬರು ಕೂತಿರಬಹುದು ಒಬ್ಬರು ನಿಂತಿರಬಹುದು ಬನ್ನಿ ಎಂದು ಹೇಳಿದರು.

ಈ ಮೂವರೂ ಆಳ್ವಾರರು ಒಬ್ಬರಿಗೊಬ್ಬರು ತಿಳಿಯದೇ ಈ ದೇವರ ದರ್ಶನಕ್ಕಾಗಿ ಬಂದಿದ್ದರು. ಆ ಸಮಯದಲ್ಲಿ ಲಕ್ಷ್ಮಿ ನಾರಾಯಣರೂ ಅಲ್ಲಿಗೆ ಬಂದರು. ಆ ಸಮಯದಲ್ಲಿ ಮೂರನೇ ಪೇಯ್ ಆಳ್ವಾರ್ ಲಕ್ಷ್ಮಿಯನ್ನು ಕಂಡರು. ನಾರಾಯಣನನ್ನೂ ಕಂಡರು. ಆ ಸಮಯದಲ್ಲಿ ಈ ಆಳ್ವಾರರು 'ತಿರುಕಂಡೇನ್' ಎನ್ನುವ ಮಂಗಳಶಾಸನ ಮಾಡಿದರು. ಮತ್ತಿಬ್ಬರು ಆಳ್ವಾರರು ಧ್ಯಾನದಿಂದ ದೇವರನ್ನು ದರ್ಶಿಸಿದರು. ಈ ಕಾರಣದಿಂದ ವೈಷ್ಣವ ಸಂಪ್ರದಾಯುದಲ್ಲಿ ಮೊದಲು ಲಕ್ಷ್ಮಿದೇವಿಯನ್ನು ದರ್ಶಿಸಿ ನಂತರ ಶ್ರೀಮನ್ನಾರಾಯಣನನ್ನು ದರ್ಶಿಸುತ್ತಾರೆ.

**ಇವರು ಮಂಗಳಶಾಸನ ಮಾಡಿದ ಸ್ಥಳಗಳು :**

**1. ತಿರುವರಂಗಂ(ಶ್ರೀರಂಗಂ), 2. ತಿರುಕ್ಕೊಡಂದೈ, 3. ತಿರುವಿನ್ನಗರ್, 4. ತಿರುಮಾಲಿರುಂಸೋಲೈ, 5. ತಿರುಕ್ಕೋಟ್ಟಿಯೂರ್, 6. ತಿರುಪರಮಪದಂ (ವೈಕುಂಠಂ), 7. ತಿರುಪ್ಪಾರ್‌ಕಡಲ್ (ಕ್ಷೀರ ಸಮುದ್ರ), 8. ತಿರುಪತಿ (ತಿರುವೇಂಕಟಂ), 9. ತಿರುಕ್ಕಡಿಗೈ, 10. ತಿರುವಲ್ಲಿಕ್ಕೇಣಿ, 11. ತಿರುವೆಕ್ಕಾ, 12. ತಿರುಪ್ಪಾಡಗಂ, 13. ತಿರುವೇಲುಕ್ಕೈ, 14. ತಿರು ಅಟ್ಟಪಯಕರಂ**

**4. ತಿರುಮಳಿಸ್ಸೈ ಆಳ್ವಾರ್** :– ಇವರು ದ್ವಾಪರ ಯುಗದ ಕೊನೆಯಲ್ಲಿ ತೈ ಮಾಸದಲ್ಲಿ ಮಹಾನಕ್ಷತ್ರದಲ್ಲಿ ಜನ್ಮ ತಾಳಿದರು. ಇವರು ದ್ವಾಪರಯುಗದಲ್ಲಿ 1,000 ವರ್ಷ ಹಾಗೂ ಕಲಿಯುಗದಲ್ಲಿ 3,700 ವರ್ಷಗಳು ಒಟ್ಟು 4,700 ವರ್ಷಗಳು ಬಾಳಿದರು. (ಪ್ರಸ್ತುತ 100 ವರ್ಷ ಅಯಸ್ಸು ಇರುವುದೇ ಬಹಳ ಕಷ್ಟ).

ದ್ವಾಪರಯುಗದಲ್ಲಿ ಋಷಿ ಮುನಿಗಳು ತಪಸ್ಸು ಮಾಡಲು ವಿಷ್ಣುವನ್ನು ಸರಿಯಾದ ಸೂಕ್ತವಾದ ಸ್ಥಳವನ್ನು ತೋರಿಸಲು ಕೇಳಿದರು. ವಿಷ್ಣುವು ಮಳಿಸ್ಸೈ ಎಂಬ ಬಿದುರು ಕಾಡಿನಲ್ಲಿ ಜಾಗವನ್ನು ತೋರಿಸಿದರು. ಆ ಸ್ಥಳದಲ್ಲಿ ಋಷಿ

ಮುನಿಗಳು ತಪಸ್ಸು ಮಾಡಿದರು. ಆ ಋಷಿ ಮುನಿಗಳಲ್ಲಿ ಒಬ್ಬರಾದ ಭಾರ್ಗವ ಮುನಿಗಳ ಪತ್ನಿ ಗರ್ಭ ಧರಿಸಿ ಒಂದು ಮಗುವನ್ನು ಹೆತ್ತರು. ಆ ಮಗುವು ಪಿಂಡ ರೂಪಿಯಾಗಿದ್ದಿತು. ಆ ಮಗುವನ್ನು (ಪಿಂಡವನ್ನು) ಬಿದಿರು ಕಾಡಿನಲ್ಲೇ ಬಿಟ್ಟು ಹೊರಟು ಹೋದರು.

ಜಿಂಕೆಯ ಗರ್ಭದಿಂದ ಋಷಿ ಸಿಂಗರ್, ಮೊಲದ ಗರ್ಭದಿಂದ ಗೌತಮ ಮುನಿ, ಹುತ್ತದಿಂದ ವಾಲ್ಮೀಕಿ ಮಹರ್ಷಿ, ಮಣ್ಣಿನ ಕೊಡದಿಂದ ವಸಿಷ್ಠ ಮಹರ್ಷಿ ಜನ್ಮಿಸಿದ ರೀತಿ ಈ ಭಾರ್ಗವ ಮಹರ್ಷಿ ಪತ್ನಿ ಕನಕಾಂಗಿಗೆ ಸುದರ್ಶನ ಚಕ್ರ ಅಂಶದಿಂದ ಈ ಆಳ್ವಾರರು ಜನಿಸಿದರು. ಈ ನಾಲ್ಕೂ ಜನ ಆಳ್ವಾರರು ಶಂಖು, ಚಕ್ರ, ಗದೆ, ಖಡ್ಗ ರೂಪಗಳ ಅಂಶದಿಂದ ಜನಿಸಿರುವರು. ವೈಕುಂಠದಿಂದ ನಾರಾಯಣನು ಲಕ್ಷ್ಮಿಯನ್ನು ನೋಡಿ, ಲಕ್ಷ್ಮಿಯು ಈ ಪಿಂಡ (ಮಗು)ವನ್ನು ನೋಡಿದಾಗ ಆ ಪಿಂಡಕ್ಕೆ ಕೈ, ಕಾಲು, ಕಣ್ಣು, ಮಾನವನ ಎಲ್ಲ ಅವಯವಗಳು ಬಂದು ಮಗುವು ಅಳುವುದಕ್ಕೆ ಶುರು ಮಾಡಿತು. ಮಗು ಅತ್ತಾಗ ಲಕ್ಷ್ಮೀನಾರಾಯಣರು ಭೂಲೋಕಕ್ಕೆ ಬಂದು ಮಗುವಿಗೆ ತಮ್ಮ ಎದೆ ಹಾಲುಣಿಸಿದರು. ನಂತರ ಆ ಮಗುವು ತನ್ನ ಹೆಬ್ಬೆರಳನ್ನು ಚೀಪುವಾಗ ಹಾಲು ಬರುವಂತೆ ವರ ಕರುಣಿಸಿ ಮಾಯವಾದರು. ಮಗುವು ಹಸಿವಾದಾಗಲೆಲ್ಲಾ ತನ್ನ ಹೆಬ್ಬೆರಳನ್ನು ಚೀಪುತ್ತಾ ಹಾಲು ಕುಡಿದು ತನ್ನ ಹೊಟ್ಟೆ ತುಂಬಿಸಿಕೊಳ್ಳುತ್ತಿತ್ತು.

ಮಳಿಸ್ಸೈ (ಬಿದಿರು ಕಾಡು)ನಲ್ಲಿ ತಿರುವಾಳನ್ ಎಂಬಾತ ಬಿದಿರು ಕೊಯ್ದು ಅದರಿಂದ ಬೇರೆ ವಸ್ತುಗಳನ್ನು ಮಾಡಿ ವ್ಯಾಪಾರ ಮಾಡಿ ಜೀವಿಸುತ್ತಿದ್ದನು. ಒಮ್ಮೆ ಇಲ್ಲಿ ಬಿದಿರು ಕೊಯ್ಯುತ್ತಿರುವಾಗ ಈ ಮಗು ದೊರಕಿತು. ತನಗೆ ಮಕ್ಕಳಿಲ್ಲದಿರುವಾಗ ಈ ಮಗುವನ್ನು ಆ ದೇವರೇ ಕರುಣಿಸಿದರೆಂದು ಸಂತೋಷದಿಂದ ತನ್ನ ಮನೆಗೆ ಹೊತ್ತೊಯ್ದನು. ಮನೆಯಲ್ಲಿ ಆ ಮಗುವಿಗೆ ಹಾಲುಣಿಸಿದರೆ ಹಾಲು ಕುಡಿಯುತ್ತಿರಲಿಲ್ಲ, ಮಾತನಾಡಿಸಿದರೆ ಮಾತನಾಡುತ್ತಿರಲಿಲ್ಲ. ಯಾವಾಗಲೂ ದೈವ ಚಿಂತನೆಯಲ್ಲೇ ಇರುತ್ತಿತ್ತು. ಮಳಿಸ್ಸೈ ಎಂಬ ಕಾಡಿನಲ್ಲಿ ದೈವ ಪ್ರೇರಣೆಯಿಂದ ಸಿಕ್ಕಿದ ಮಗುವಾದ್ದರಿಂದ ಆ ಮಗುವಿಗೆ ತಿರುಮಳಿಸ್ಸೈ ಪ್ರಾಣ್ ಎಂದು ನಾಮಕರಣ ಮಾಡಿದರು.

ಆ ಮಗುವು ಯಾರ ಬಳಿಯೂ ಹಾಲು ಕುಡಿಯುತ್ತಿರಲಿಲ್ಲವಾದ್ದರಿಂದ ಆ ಊರಿನ ಜನರೆಲ್ಲರೂ ಮಗುವನ್ನು ನೋಡಲು ಬರುತ್ತಿದ್ದರು. ಒಮ್ಮೆ ತುಂಬಾ

ವಯಸ್ಸಾದ ಅಜ್ಜಿ, ತಾತ ಮಗುವನ್ನು ನೋಡಲು ಬಂದು ತಮ್ಮ ಮನೆಯಲ್ಲಿದ್ದ ಹಾಲನ್ನು ತಂದು 'ಮಗುವೇ ಈ ಹಾಲನ್ನಾದರೂ ಕುಡಿ' ಎಂದು ಕೇಳಿಕೊಂಡರು. ಆಗ ಮಗು ಆ ಹಾಲನ್ನು ಕುಡಿಯಿತು. ಇದೇ ರೀತಿ ದಿನಂಪ್ರತಿ ಆಗುತ್ತಿರುವಾಗ ಒಂದು ದಿನ ಆ ಮಗುವು ಸ್ವಲ್ಪ ಹಾಲನ್ನು ಉಳಿಸಿ ಆ ಹಾಲನ್ನು ಆ ಮುದಿ ದಂಪತಿಗಳಿಗೆ ಕುಡಿಯಲು ಹೇಳಿತು. ಆಗ ಆ ಮುದಿ ದಂಪತಿಗಳು ಹಾಲನ್ನು ಕುಡಿದಾಗ ನವ ಯುವಕರಂತೆ ಬದಲಾದರು. ನವ ಯುವಕರಂತೆ ಬದಲಾದ ಆ ದಂಪತಿಗೆ ಒಂದು ಮಗುವು ಜನಿಸಿತು. ಆ ಮಗುವೇ ಕಣಿಕರ್ಣನ್. ಕಾಲಾನಂತರ ಕಣಿಕರ್ಣನೇ ಶಿಷ್ಯನಾಗಿ ಬಂದನು. ತಿರುಮಳಿಸ್ಸೈ ಪ್ರಾಣ್ ತಿರುವಾಳನ್ ಮನೆಯಲ್ಲಿ 7 ವರ್ಷಕಾಲ ಕಳೆದು ತೀರ್ಥಯಾತ್ರೆಗೆ ಹೊರಟರು.

ಎಲ್ಲಾ ಮತಗಳಲ್ಲಿಯೂ ಇದ್ದು ಶೈವರಾಗಿ, ಕೊನೆಗೆ ವೈಷ್ಣವರಾಗಿ ಬದಲಾದರು. ಶೈವ ಮತದಲ್ಲಿದ್ದುದರಿಂದ ಅವರಿಗೆ ಶಿವಾಚಾರ್ಯ ಎಂಬ ಹೆಸರೂ ಇದ್ದಿತು.

ಒಮ್ಮೆ ಪೇಯ್ ಆಳ್ವಾರರು ತುಳಸಿ ಗಿಡವನ್ನು ತೋಟದಲ್ಲಿ ತಲೆಕೆಳಕಾಗಿ ನೆಟ್ಟು, ತೂತುಗಳಿರುವ ಮಣ್ಣಿನ ಮಡಿಕೆಯಿಂದ ಕಿತ್ತುಹೋಗಿರುವ ದಾರಗಳನ್ನು ಜೋಡಿಸಿ ಅದರಿಂದ ಹಗ್ಗವನ್ನು ಮಾಡಿ ಬಾವಿಯಿಂದ ನೀರನ್ನು ತಂದು ಆ ಗಿಡಕ್ಕೆ ಹಾಕುತ್ತಾರೆ. ಆದನ್ನು ಕಂಡ ಶಿವಾಚಾರ್ಯರು 'ಏನು ಸ್ವಾಮಿ ತಾವೇನು ಪಿಶಾಚಿಯೇ, ಹುಚ್ಚರೇ' ಎಂದು ಕೇಳಿದರು. ಆಗ ಪೇಯ್ ಆಳ್ವಾರರು 'ನಾನು ಪಿಶಾಚಿಯೂ ಅಲ್ಲ, ಹುಚ್ಚನೂ ಅಲ್ಲ ನೀನೇ ಹುಚ್ಚ' ಎಂದರು. ಆ ಉತ್ತರವನ್ನಾಲಿಸಿದ ಶಿವಾಚಾರ್ಯರು ಅದು ಹೇಗೆಂದು ಕೇಳಿದರು. ಪೇಯ್ ಆಳ್ವಾರರು ಅದಕ್ಕುತ್ತರಿಸಿ "ಈ ಕಿತ್ತು ಹೋದ ದಾರವು ಎಲ್ಲಾ ಮತಗಳ ಪ್ರತೀಕ, ಈ ತೂತು ಬಿದ್ದಿರುವ ಮಡಿಕೆಯು ಎಲ್ಲಾ ಧರ್ಮಗಳ ಪ್ರತೀಕ, ಎಲ್ಲಾ ಧರ್ಮಗಳಲ್ಲಿಯೂ ತೂತುಗಳಿದ್ದೇ ಇರುತ್ತವೆ. ತಲೆಕೆಳಕಾಗಿ ನಾಟಿ ಮಾಡಿರುವ ತುಳಸಿ ಗಿಡವು ಎಲ್ಲಾ ಮತ ಧರ್ಮಗಳ ಪ್ರತೀಕ. ಕಾಲಚಕ್ರದಲ್ಲಿ ಚಿಗುರೊಡೆದು, ಗಿಡವಾಗಿ, ಮರವಾಗಿ, ಹೂವಾಗಿ ಕಾಯಾಗಿ ಹಣ್ಣಾಗಿ ಮತ್ತೆ ಮಣ್ಣಿನಲ್ಲಿ ಬೆರೆತುಹೋಗುತ್ತದೆ. ಆದರೆ ಬೇರು ಒಂದೇ ಆಗಿರುತ್ತದೆ. ಆದ್ದರಿಂದ ಬೇರೆಲ್ಲ ಮತಗಳೂ ಈ ಹೂವು, ಹಣ್ಣು, ಕಾಯಿಗಳಂತೆ. ಆದರೆ ವೈಷ್ಣವ ಮತವೊಂದು ಮಾತ್ರ ಬೇರಿನಂತೆ ಎಂದು ತಿಳಿಸಿದರು.

ಇದನ್ನು ತಿಳಿದ ತಿರುಮಳಿಸ್ಯೆ ಆಳ್ವಾರರು ಇಷ್ಟು ಕಾಲ ತಮಗೆ ತಿಳಿಯದೇ ಅನ್ಯ ಮತಗಳಲ್ಲಿ ಕಾಲ ವ್ಯರ್ಥ ಮಾಡಿದೆ ಎಂದು ಆಲೋಚಿಸಿ ವೈಷ್ಣವ ಮತಕ್ಕೆ ಮತಾಂತರಗೊಂಡು ದಿವ್ಯಕ್ಷೇತ್ರ ದರ್ಶನಕ್ಕೆ ಮೊದಲಿಟ್ಟರು. ಇವರು ತಿರುವೆಕ್ಕಾ ಎಂಬ ದಿವ್ಯ ದೇಶವನ್ನು ಸೇರಿದರು. ಇವರು ಹೋಗುವ ಕಡೆಯಲ್ಲೆಲ್ಲಾ ಎಲ್ಲಾ ದೇವರು ಇವರನ್ನೇ ನೋಡುತ್ತಿದ್ದರು. ಇವರು ಅಷ್ಟು ಮಹಾನುಭಾವರಾಗಿ ಬೆಳೆದಿದ್ದರು. ತಿರುವೆಕ್ಕಾ ದೇಗುಲದ ಬಳಿ ವಾಸ ಮಾಡುತ್ತಿದ್ದಾಗ ಓರ್ವ ಮುದುಕಿಯೊಬ್ಬರು ಪ್ರತಿದಿನವೂ ಬಂದು ಇವರು ತಂಗಿದ್ದ ಗುಡಿಸಲನ್ನು ಸ್ವಚ್ಛ ಮಾಡಿ ಹೋಗುತ್ತಿದ್ದರು. ಇದನ್ನು ಕಂಡ ಆಳ್ವಾರರು ಮುದುಕಿಯನ್ನು ಕುರಿತು ಏನು ಬೇಕೆಂದು ಕೇಳಿದರು. ಆಗ ಮುದುಕಿಯು ನನಗೆ ಯೌವ್ವನವು ಬೇಕೆಂದಾಗ ಅಸ್ತು ಎಂದು ಹೇಳಿ ಯೌವ್ವನವನ್ನು ಕರುಣಿಸಿದರು.

ಆ ಊರಿನ ರಾಜನು ಈ ಸುಂದರವಾದ ದೇವ ಕನ್ಯೆಯಂತಿರುವ ಯುವತಿಯನ್ನು ಕಂಡು ಮೋಹಗೊಂಡು ಮದುವೆಯಾದನು. ಚಿರ ಯೌವ್ವನೆಯಾದ ಮಡದಿಯನ್ನು ಕುರಿತು 'ನನಗೆ ಮಾತ್ರ ವಯಸ್ಸಾಗುತ್ತಿದೆ. ನೀನು ಹಾಗೆಯೇ ಇದ್ದೀಯೆ. ನಿನ್ನ ಯೌವ್ವನದ ಗುಟ್ಟೇನು?' ಎಂದನು. ಆಗ ಮಡದಿಯು ನಾನು ತಿರುಮಳಿಸ್ಯೆ ಆಳ್ವಾರರ ಅನುಗ್ರಹದಿಂದ ಈ ರೀತಿ ಇದ್ದೇನೆ ಎಂದುತ್ತರಿಸಿದಳು. ರಾಜನು ತಾನೂ ಸಹ ಆಳ್ವಾರರ ಅನುಗ್ರಹ ಪಡೆಯುತ್ತೇನೆಂದನು. ಅದಕ್ಕೆ ಆ ಸುಂದರಿಯು ನೀವೆಲ್ಲೂ ಹೋಗಬೇಕಾಗಿಲ್ಲ. ನಮ್ಮ ಅರಮನೆಗೆ ಊಟಕ್ಕೆ ಬರುವ ಕಣಿಕರ್ಣನ ಗುರುಗಳೇ ತಿರುಮಳಿಸ್ಯೆ ಆಳ್ವಾರರು ಎಂದುತ್ತರಿಸಿದಳು. ಇದನ್ನು ಕೇಳಿದ ರಾಜ ಆಳ್ವಾರರ ಶಿಷ್ಯನಾದ ಕಣಿಕಣ್ಣನ್‌ನನ್ನು ಕರೆಸಿ ನಿನ್ನ ಗುರುಗಳನ್ನು ಕರೆಸು. ನನ್ನ ಮೇಲೆ ಹಾಡನ್ನು ಹಾಡಲಿ ನನಗೂ ಚಿರಯೌವ್ವನದ ಆಶೀರ್ವಾದ ನೀಡಲಿ ಎಂದು ಆದೇಶ ನೀಡುತ್ತಾನೆ. ಕಣಿಕಣ್ಣನನು ತಮ್ಮ ಗುರುಗಳು ದೇವರನ್ನು ಬಿಟ್ಟು ಬೇರಾರ ಮೇಲೂ ಹಾಡನ್ನು ಹಾಡುವುದಿಲ್ಲ ಎಂದು ತಿಳಿಸಿದಾಗ ರಾಜನು ಕೋಪಗೊಂಡು ಕಣಿಕಣ್ಣನನ್ನು ಊರು ಬಿಟ್ಟು ತೊಲಗು ಎಂದು ಆಜ್ಞಾಪಿಸುತ್ತಾನೆ.

ತಿರುಮಳಿಸ್ಯೆ ಆಳ್ವಾರರು ಶಿಷ್ಯನ ವಿಯೋಗ ಸಹಿಸಲಾರದೆ ತಾವು ಹೊರಡುವ ಮುನ್ನ ವೇಗಾಸೇತು ಆರ್ಚಾಮೂರ್ತಿಯ ಬಳಿ ಹೋಗಿ "ಕಣಿಕಣ್ಣನೇ ಇಲ್ಲದಿರುವಾಗ ನಮಗೇನು ಕೆಲಸ. ನೀವೂ ಹೊರಡಿ" ಎಂದು ಹೇಳಿದರು.

ಅದರಂತೆ ಪರಮಾತ್ಮನು ತಾನು ಮಲಗಿದ್ದ ಆದಿಶೇಷನನ್ನು ಚಾಪೆಯ ರೂಪದಲ್ಲಿ ಸುತ್ತಿಕೊಂಡು ಆಳ್ವಾರನ್ನು ಹಿಂಬಾಲಿಸಿದ. ಆಗ ಆ ಊರೇ ಕತ್ತಲಾಯಿತು.

ಕಾರಣವೇನೆಂದು ರಾಜನು ಕೇಳಲು ಮಂತ್ರಿಯು ಕಣಿಕಣ್ಣನ್, ತಿರುಮಳಿಶೈ ಆಳ್ವಾರರು ಹೊರಡುವಾಗ ಭಗವಂತನೂ ಅವರ ಹಿಂದೆಯೇ ಹೊರಟುಹೋದರು. ಆದಕಾರಣ ಈ ಸ್ಥಳ ಕತ್ತಲಾಗಿದೆ ಎಂದು ತಿಳಿಸಿದನು. ಆ ಸ್ಥಳವೇ ಓರ್ ಇರುಕ್ಕೈ.

ವಿಷಯ ತಿಳಿದ ರಾಜನು ಓರ್ ಇರುಕ್ಕೈ ಸ್ಥಳಕ್ಕೆ ಓಡಿ ಬಂದು ಆಚಾರ್ಯರ ಕ್ಷಮೆ ಕೋರಿ ವಾಪಸ್ ಕಾಂಚೀಪುರಕ್ಕೆ ಬರುವಂತೆ ಪ್ರಾರ್ಥಿಸಿಕೊಂಡ. ಆಗ ಆಳ್ವಾರರು ಪ್ರಸನ್ನರಾಗಿ ಪುನಃ ನಗರಕ್ಕೆ ಹಿಂತಿರುಗುವಾಗ ಪರಮಾತ್ಮನನ್ನುದ್ದೇಶಿಸಿ 'ರಾಜನೇ ಕರೆಯುತ್ತಿರುವಾಗ ಬನ್ನಿ ಮತ್ತೆ ಹಿಂತಿರುಗಿ ಹೋಗೋಣ' ಎಂದರು. ಪರಮಾತ್ಮನೂ ಯಥಾಸ್ಥಾನ ಸೇರಿದ. ಆದರೆ ಈ ಬಾರಿ ಮೊದಲು ಮಲಗಿದ ವಿರುದ್ಧ ದಿಕ್ಕಿನಲ್ಲಿ ಮಲಗಿದ. ಹಿಂದೆ ಬಲಗೈಯನ್ನೇ ದಿಂಬಾಗಿ ಇಟ್ಟುಕೊಂಡಿದ್ದ ಭಗವಂತನು ಈಗ ಎಡಗೈಯನ್ನು ದಿಂಬಾಗಿ ಇಟ್ಟುಕೊಂಡು ಮಲಗಿದರು. ಶ್ರೀರಂಗನಾಥನು ಶಯನಿಸಿರುವ ಎಲ್ಲಾ ಕ್ಷೇತ್ರಗಳಲ್ಲೂ ಬಲಗೈಯನ್ನೇ ದಿಂಬಾಗಿ ಇಟ್ಟುಕೊಂಡಿದ್ದಾರೆ. ಈ ಕ್ಷೇತ್ರದಲ್ಲಿ ಮಾತ್ರ ಎಡಗೈಯನ್ನು ತಲೆದಿಂಬಾಗಿ ಇಟ್ಟುಕೊಂಡಿದ್ದಾನೆ. ಇದು ಅವನ ಭಕ್ತ ಪರಾಧೀನತೆಗೆ ಸಾಕ್ಷಿ. ಭಕ್ತರ ಮಾತಿನಂತೆ ನಡೆದನಾದ್ದರಿಂದ "ಯಥೋಕ್ತಕಾರಿ" ಎಂಬ ಹೆಸರು ಪ್ರಸಿದ್ಧವಾಯಿತು. ಇಂತಹ ಪರಮ ಪುರುಷನು ಎಲ್ಲಾ ಭಕ್ತರ, ಪಂಡಿತರ, ಪಾಮರರ ಅಭೀಷ್ಟಗಳನ್ನು ನೆರವೇರಿಸಿ ಆನಂದವನ್ನು ಉಂಟುಮಾಡುತ್ತಾನೆ ಎಂದು ಕೊಂಡಾಡಿದ್ದಾರೆ ಆಚಾರ್ಯರು. ತಮಿಳಿನಲ್ಲಿ 'ಸೊನ್ನವಣ್ಣಂ ಸೈದ ಪೆರುಮಾಳ್' ಎನ್ನುತ್ತಾರೆ.

**ತಿರುಮಳಿಸೈ ಆಳ್ವಾರರು ಮಂಗಳಶಾಸನ ಮಾಡಿದ ಸ್ಥಳಗಳು :**

**1. ತಿರುವರಂಗಂ (ಶ್ರೀರಂಗಂ), 2. ತಿರುವಳ್ಳಿಕ್ಕೇಣಿ, 3. ತಿರುಅನ್ಬಿಲ್, 4. ತಿರು ಊರಗಂ, 5. ತಿರು ಯವ್ವುಲ್, 6. ತಿರು ಕವಿತ್ತಲಂ, 7. ತಿರುಕ್ಕುಡಂದೈ, 8. ತಿರುಕ್ಕುರುಂಗುಡಿ, 9. ತಿರುಕ್ಕೂಡಲ್, 10. ತಿರುಕ್ಕೋಟ್ಟಿಯೂರ್, 11. ತಿರುಪ್ಪಾಡಗಂ, 12. ತಿರುಪೇರ್‌ನಗರ್ 13. ತಿರುವೆಕ್ಕಾ, 14. ತಿರುವೇಂಕಟಂ (ತಿರುಪತಿ)**

**5. ನಮ್ಮಾಳ್ವಾರ್** :– ಇವರು ಕಲಿಯುಗ ಪ್ರಾರಂಭವಾಗಿ 43ನೇ ದಿನಕ್ಕೆ ಹುಟ್ಟಿದವರು. ಪ್ರಮಾದಿ ವರ್ಷ, ವೈಶಾಖ ಮಾಸ, ವಿಶಾಖ ನಕ್ಷತ್ರದಲ್ಲಿ ತಿರುಕ್ಕುರುಗೂರ್ ಎಂಬಲ್ಲಿ ಮಹಾವಿಷ್ಣುವಿನ ನಿತ್ಯಸೂರ್ಯ ಅಂಶದಲ್ಲಿ ಶಟಗೋಪನ್ ಎನ್ನುವ ಹೆಸರಿನಲ್ಲಿ ಅವತರಿಸಿದವರು ಈ ನಮ್ಮಾಳ್ವಾರ್. ಇವರಿಗೆ ಮಾರನ್, ಶಟಗೋಪನ್, ಪರಾಂಕುಶನ್, ವಕುಳಾಭರಣ್, ಕುರುಗೂರ್‌ನಂಬಿ, ಕುರುಗೈಪಿರಾಣ್, ತೆನ್ನರಂಗನ್ ಎನ್ನುವ ಮುಂತಾದ ಹೆಸರುಗಳಿವೆ.

ತಿರುಕ್ಕೂರಿನಲ್ಲಿರುವ ಕಾರಿಯಾರ್ ಎನ್ನುವವರು ಉಡಯನಂಗ್ಯೆ ಎಂಬುವರನ್ನು ಮದುವೆಯಾದರು. ಇವರು ತಿರುಕ್ಕುರುಂಗುಡಿ ಎಂಬ ದೇಗುಲದಲ್ಲಿ ಪುತ್ರ ಭಾಗ್ಯಕ್ಕಾಗಿ ಬೇಡಿದರು. ಆಗ ನಾರಾಯಣನು ಆ ದಂಪತಿಗಳ ಕನಸಿನಲ್ಲಿ ಬಂದು ತಾವೇ ಮಗುವಾಗಿ ಹುಟ್ಟುತ್ತೇವೆಂದು ಹೇಳಿದರು. ತದನಂತರ ಆ ದಂಪತಿಗೆ ಸುಂದರವಾದ ಗಂಡು ಮಗು ಹುಟ್ಟಿತು. ಆದರೆ ಆ ಮಗು ಹುಟ್ಟುದಾರಭ್ಯ ಜಡವಾಗಿದ್ದಿತು. ಅದನ್ನು ಕಂಡ ದಂಪತಿಗಳು ಆಳ್ವಾರ್ ತಿರುನಗರಿಯಲ್ಲಿ ದೇವರನ್ನು ಕಂಡು ಈ ರೀತಿಯಾದ ಮಗುವನ್ನು ನೀನೇ ತೆಗೆದುಕೋ ಎಂದು ಹೇಳಿದರು. ಆಗ ಆ ಮಗುವು ಹತ್ತಿರದಲ್ಲಿದ್ದ ಹುಣಸೇ ಮರದಲ್ಲಿ ಹೋಗಿ ಅವಿತುಕೊಂಡಿತು. ಈ ಮಗುವು 16 ವರ್ಷಗಳ ಕಾಲ ಈ ಮರದಲ್ಲಿಯೇ ಇದ್ದಿತು. ಈ ಹುಣಿಸೇಮರವು ಹಣ್ಣುಗಳನ್ನು ಬಿಡುವುದಿಲ್ಲ. ಅದರ ಎಲೆಗಳು ಇತರೇ ಹುಣಸೇಮರಗಳಂತೆ ಮುದುರಿಕೊಳ್ಳುವುದಿಲ್ಲ. ಅದರ ಬೇರು ಎಲ್ಲಿದೆಯೋ ಯಾರಿಗೂ ತಿಳಿಯದು. ಇದು ಮನೋವೃತ್ತಿಯಿಂದ ಇಲ್ಲಿನ ಒಂದು ವಿಚಿತ್ರವೇ ಸರಿ. ಈಗ ಈ ಮರಕ್ಕೆ 5025 ವರ್ಷವಾಗಿದೆ. (ಸಂ॥ 2020ಕ್ಕೆ)

ಮಧುರ ಕವಿ ಆಳ್ವಾರ್ ಕಾಶಿಯಲ್ಲಿ ತಪಸ್ಸು ಮಾಡುತ್ತಿದ್ದಾಗ ಒಂದು ಜ್ಯೋತಿಯೊಂದು ಪ್ರತ್ಯಕ್ಷವಾಯಿತು. ಆ ಜ್ಯೋತಿಯು ಮುಂದೆ ಮುಂದೆ ಹೋಗುತ್ತಿದ್ದಾಗ ಮಧುರಕವಿ ಆಳ್ವಾರರು ಅದನ್ನು ಹಿಂಬಾಲಿಸಿದರು. ಜ್ಯೋತಿಯು ಈ ಸ್ಥಳಕ್ಕೆ ಬಂದು ಹುಣಸೇ ಮರದಲ್ಲಿ ಮಾಯವಾಯಿತು. ಅದನ್ನು ಕಂಡ ಮಧುರ ಕವಿ ಆಳ್ವಾರರು ಧ್ಯಾನಿಸಿ ಆ ಮರದೊಳಗೆ ಏನೋ ಇರಬೇಕೆಂದು ತಿಳಿದಾಗ ಈ ನಮ್ಮಾಳ್ವಾರ್ ದರ್ಶನ ಕೊಟ್ಟು ಹೊರಗೆ ಬಂದರು. ಅವರೇ ನಮ್ಮಾಳ್ವಾರ್. ಮಧುರಕವಿ ಆಳ್ವಾರರು ನಮ್ಮಾಳ್ವಾರರನ್ನು ಕಂಡ ಕೂಡಲೇ ಇವರೇ ನಮ್ಮ ಗುರುಗಳೆಂದು ಭಾವಿಸಿ ಅವರ ಬಳಿ ಶರಣಾಗತಿಯಾದರು.

ರಾಮಾಯಣ ನಂತರ ಕಲಿಯುಗದಲ್ಲಿ ಲಕ್ಷ್ಮಣನನ್ನು ಭೂಲೋಕದಲ್ಲಿ ಹುಣಸೇಮರವಾಗಿ ಜನಿಸು ನಾನು ನಿನ್ನಲ್ಲಿ ಕೂರುತ್ತೇನೆ ಎಂದು ಶ್ರೀರಾಮ ಹೇಳಿದರು. ಅದರಂತೆ ರಾಮನ ಅವತಾರವಾದ ನಮ್ಮಾಳ್ವಾರರು ತಿರುಕ್ಕೂರುಗೂರ್‌ನಲ್ಲಿರುವ ಹುಣಸೇ ಮರದಲ್ಲಿ ಕೂತರು. ಈಗಲೂ ಇಲ್ಲಿರುವ ಹುಣಸೇ ಮರವು ಲಕ್ಷ್ಮಣನ ಅವತಾರವೆಂದೇ ಐತಿಹ್ಯ.

ನಮ್ಮಾಳ್ವಾರರು ಸಂಸ್ಕೃತದಲ್ಲಿದ್ದ ಋಗ್ವೇದ, ಯಜುರ್‌ವೇದ, ಸಾಮವೇದ, ಅಥರ್ವ ವೇದಗಳನ್ನು ತಮಿಳಿನಲ್ಲಿ ತರ್ಜಿಮೆ ಮಾಡಿ ಹೇಳಿ ಮಧುರ ಕವಿ ಆಳ್ವಾರರಿಂದ ತಾಳೆ ಗರಿಯಲ್ಲಿ ಬರೆಸಿದರು. ಈ ಕಾರ್ಯ ನಾಲ್ಕೂವರೆ ವರ್ಷಗಳ ಕಾಲ ಹಿಡಿಯಿತು.

**ಇವರು ಮಂಗಳಶಾಸನ ಮಾಡಿದ ಸ್ಥಳಗಳು :**

**1. ಶ್ರೀರಂಗಂ, 2. ತಿರುಪ್ಪೇರ್‌ನಗರ್, 3. ತಿರುಕ್ಕುಡಂದೈ, 4. ತಿರುವಿನ್ನಗರ್, 5. ತಿರುಕನ್ನಪುರಂ, 6. ತಿರುಮಾಳಿರುಂಸೋಲೈ, 7. ತಿರುಮೋಗೂರ್, 8. ಆಳ್ವಾರ್ ತಿರುನಗರಿ, 9. ಶ್ರೀವರಗುಣಮಂಗೈ, 10, ತಿರುಪುಳಿಯಂಗುಡಿ, 11. ತಿರುಪೇರೈ, 12. ಶ್ರೀವೈಕುಂಟಂ, 13. ಸೀರಿವರಮಂಗೈ, 14. ತಿರುಕ್ಕುಳಂದೈ, 15. ತಿರುಕ್ಕೋಲೂರ್, 16. ತಿರುಕ್ಕುರುಂಗುಡಿ, 17. ತಿರುತೊಲೈವಿಲ್ಲಿಮಂಗಲಂ, 18. ತಿರುವನ್‌ಪರಿಸಾರಂ, 19. ತಿರುವನಂತಪುರಂ, 20. ತಿರುಕ್ಕಾಟ್ಕರೈ, 21. ತಿರುಮೂಳಿಕಳಂ, 22. ತಿರುಪುಳಿಯೂರ್, 23. ತಿರುಚೆಂಗುಂಡ್ರೂರ್, 24. ತಿರುನಾವಾಯ್, 25. ತಿರುವಲ್ಲಾ, 26. ತಿರುವಣ್ ವಂಡೂರ್, 27. ತಿರುವಟ್ಟಾರು, 28. ತಿರುಕಡಿತ್ತಾನಂ, 29. ತಿರುವಾನ್‌ವಿಲೈ, 30. ತಿರುವೇಂಕಟಂ, 31. ತಿರು ಅಯೋಧಿ, 32. ತಿರುದ್ವಾರಕೈ, 33. ವಡಮದುರೈ, 34. ತಿರುಕ್ಕೋವಲೂರ್, 35. ತಿರುಪಾರ್ಕಡಲ್ (ಕ್ಷೀರಸಮುದ್ರ), 36. ತಿರುಪರಮಪದಂ (ವೈಕುಂಠ).**

**6. ಮಧುರ ಕವಿ ಆಳ್ವಾರ್** :- ಇವರು ತಿರುಕ್ಕೋಲೂರ್ ಎಂಬಲ್ಲಿ ನಿತ್ಯಸೂರ್ಯ (ಕಣ್ಣು)ನ ಅಂಶದಲ್ಲಿ ದ್ವಾಪರಯುಗ, ಈಶ್ವರ ಸಂವತ್ಸರ, ಚೈತ್ರ ಮಾಸ, ಶುಕ್ಲ ಚತುರ್ದಶಿ, ಚಿತ್ತಾ ನಕ್ಷತ್ರ, ಶುಕ್ರವಾರದಂದು ಜನಿಸಿದರು. ಇವರು ನಮ್ಮಾಳ್ವಾರ್ ಅವರಿಗಿಂತ ಮುಂಚೆಯೇ ಹುಟ್ಟಿದವರು. ಚಿಕ್ಕಂದಿನಿಂದಲೇ ವೇದ ಶಾಸ್ತ್ರಗಳನ್ನು ಓದಿ ಚೆನ್ನಾಗಿ ಅಭ್ಯಾಸ ಮಾಡಿದರು. ಚಿಕ್ಕ ವಯಸ್ಸಿನಲ್ಲಿಯೇ

ಮಥುರಾ, ದ್ವಾರಕಾ, ಬದರಿನಾಥ್, ನೈಮಿಷಾರಣ್ಯ, ಮುಕ್ತಿನಾಥ್ ಹಾಗೂ ಮತ್ತಿತರ ದಿವ್ಯ ದೇಶಗಳ ಪುಣ್ಯ ಯಾತ್ರೆಯನ್ನು ಮಾಡಿದರು. ಪುಣ್ಯಯಾತ್ರೆ ಮಾಡುವ ಸಮಯದಲ್ಲಿ ಆಕಾಶದಲ್ಲಿ ಒಂದು ಜ್ಯೋತಿ ಕಾಣಿಸಿತು. ಆ ಜ್ಯೋತಿಯು ಮುಂದೆ ಮುಂದೆ ಹೋಗುತ್ತಿದ್ದಾಗ ಮಧುರಕವಿ ಆಳ್ವಾರರು ಅದನ್ನು ಹಿಂಬಾಲಿಸಿದರು. ಜ್ಯೋತಿಯು ಈ ಸ್ಥಳಕ್ಕೆ ಬಂದು ಹುಣಸೇ ಮರದಲ್ಲಿ ಮಾಯವಾಯಿತು. ಅದನ್ನು ಕಂಡ ಮಧುರ ಕವಿ ಆಳ್ವಾರರು ಧ್ಯಾನಿಸಿ ಆ ಮರದೊಳಗೆ ಏನೋ ಇರಬೇಕೆಂದು ತಿಳಿದಾಗ ನಮ್ಮಾಳ್ವಾರ್ ದರ್ಶನ ಕೊಟ್ಟು ಹೊರಗೆ ಬಂದರು. ಮಧುರಕವಿ ಆಳ್ವಾರರು ನಮ್ಮಾಳ್ವಾರರನ್ನು ಕಂಡ ಕೂಡಲೇ ಇವರೇ ನಮ್ಮ ಗುರುಗಳೆಂದು ಭಾವಿಸಿ ಅವರ ಬಳಿ ಶರಣಾಗತಿಯಾದರು. ಅವರನ್ನು ಕಂಡ ಕ್ಷಣದಿಂದ ಬೇರಾವ ದಿವ್ಯ ದೇಶಗಳಿಗೆ ಮಂಗಳಶಾಸನ ಮಾಡದೆ ತಮ್ಮ ಗುರುಗಳಾದ ನಮ್ಮಾಳ್ವಾರರ ಮೇಲೆಯೇ ಮಂಗಳಶಾಸನ ಮಾಡಿದರು.

ನಾಲ್ಕೂವರೆ ವರ್ಷಗಳ ಕಾಲ ನಮ್ಮಾಳ್ವಾರರು ಸಂಸ್ಕೃತದಲ್ಲಿದ್ದ ಋಗ್ವೇದ, ಯಜುರ್‌ವೇದ, ಸಾಮವೇದ, ಅಥರ್ವ ವೇದಗಳನ್ನು ತಮಿಳಿನಲ್ಲಿ ತರ್ಜಿಮೆ ಮಾಡಿ ಹೇಳಿದಾಗ ಮಧುರ ಕವಿ ಆಳ್ವಾರರು ತಾಳೆ ಗರಿಯಲ್ಲಿ ಬರೆದರು. ಈ ವೇದಗಳ ಸಾರವನ್ನು, ವೈಷ್ಣವ ಮತದ ಶ್ರೇಷ್ಠತೆಯನ್ನು ಪ್ರಪಂಚದಲೆಲ್ಲಾ ಸಾರಿದರು.

**7. ಕುಲಶೇಖರ ಆಳ್ವಾರ್** :- ಇವರು ಕಲಿಯುಗ ಪ್ರಾರಂಭವಾದ 27ನೇ ವರ್ಷದಲ್ಲಿ ಪರಾಭವ ವರ್ಷ, ಮಾಘಮಾಸ, ಪುನರ್ವಸು ನಕ್ಷತ್ರ, ಶುಕ್ರವಾರದಂದು ನಾರಾಯಣನ ಕೌಸ್ತುಭ (ಆಭರಣ) ಅಂಶದಿಂದ ಕೇರಳದಲ್ಲಿ ಜನ್ಮ ತಾಳಿದರು.

ಕೇರಳದ ಸೇರನಾಡನ್ನು ಇಂದು ಕೊಲ್ಲಂ ಎಂದು ಕರೆಯುತ್ತಾರೆ. ಸೇರನಾಡನ್ನು ದಿಡವಿರದನ್ ಎಂಬ ರಾಜನು ಆಳುತ್ತಿದ್ದನು. ಅವನಿಗೆ ಅಷ್ಟೈಶ್ವರ್ಯಗಳಿದ್ದರೂ ಸಂತಾನ ಭಾಗ್ಯವಿರಲಿಲ್ಲ. ಅವನು ಒಮ್ಮೆ ಸಂತಾನ ಪ್ರಾಪ್ತಿಗಾಗಿ ನಾರಾಯಣನನ್ನು ಬೇಡಿಕೊಂಡಾಗ ಪುತ್ರ ಸಂತಾನವಾಯಿತು. ಆ ಪುತ್ರನೇ ಕುಲಶೇಖರ.

ಕುಲಶೇಖರನು ರಾಜಪುತ್ರನಾದ್ದರಿಂದ ಸಕಲ ಸಮರ ಕಲೆಗಳನ್ನು ಕಲಿತಿದ್ದನು. ಆನಂತರ ಪಟ್ಟಾಭಿಷಿಕ್ತರಾಗಿ ನಾಡನ್ನು ವಿಸ್ತರಿಸಿದನು. ಪಲ್ಲವ,

ಚೋಳ, ಪಾಂಡ್ಯ ದೇಶಗಳನ್ನು ಬಗ್ಗಿಬಡಿದು ತನ್ನ ನಾಡಿಗೆ ಸೇರಿಸಿಕೊಂಡನು. ನಂತರ ಮದುವೆಯಾಗಿ ಗೃಹಸ್ಥಾಶ್ರಮ ಆಚರಿಸಿ ಒಂದು ಗಂಡು, ಒಂದು ಹೆಣ್ಣು ಮಗುವಿನ ತಂದೆಯಾದನು. ಗಂಡು ಮಗುವಿಗೆ ತಂದೆಯ ಹೆಸರಾದ ದಿಡವಿರದನ್ ಎಂಬ ಹೆಸರಿಟ್ಟು ಹೆಣ್ಣು ಮಗುವಿಗೆ ಇಳೈ ಎಂಬ ಹೆಸರಿಟ್ಟು ಸಂತೋಷದಿಂದ ಜೀವನವನ್ನು ಸಾಗಿಸುತ್ತಿದ್ದನು.

ಅವನಿಗೆ ಹಠಾತ್ತಾಗಿ ಈ ಭೂಮಿಯಲ್ಲಿನ ಸಕಲೈಶ್ವರ್ಯಗಳೂ ಅಲ್ಪವೆನಿಸಿ ಭಗವಂತನ ಜ್ಞಾನವೊಂದೇ ಅತ್ಯಂತ ಶ್ರೇಷ್ಠ ಎನಿಸಿ ಶ್ರೀಮದ್ ರಾಮಾಯಣವನ್ನು ಕೇಳಲು ಪ್ರಾರಂಭಿಸಿದನು.

ಒಮ್ಮೆ ರಾಮಾಯಣವನ್ನು ಕೇಳುತ್ತಿದ್ದಾಗ ರಾವಣನು ಸೀತೆಯನ್ನು ಅಪಹರಿಸುವ ಸನ್ನಿವೇಶದಲ್ಲಿ ತಲ್ಲೀನರಾಗಿ ಒಮ್ಮೆಲೇ ತನ್ನ ಸೈನಿಕರನ್ನುದ್ದೇಶಿಸಿ 'ಏಳಿ ಎದ್ದೇಳಿ, ಇಷ್ಟು ಶಕ್ತಿವಂತರೂ, ಬಲವಂತರೂ ಆದ ನಾವು ಹೋಗಿ ಸೀತೆಯನ್ನು ಬಿಡಿಸಿಕೊಂಡು ಬರೋಣ, ನಡೆಯಿರಿ!' ಎಂದು ಕಿರುಚಿದನು. ಆಗ ಅಲ್ಲಿದ್ದ ರಾಜಪರಿವಾರವು 'ಅರಸನೇ ಇದು ಕಲಿಯುಗ, ರಾಮಾಯಣವು ನಡೆದಿದ್ದು ತ್ರೇತಾಯುಗದಲ್ಲಿ. ಈಗ ತಾವು ಸೀತೆಯನ್ನು ಮರಳಿ ತರಲು ಸಾಧ್ಯವಿಲ್ಲ' ಎಂದು ತಿಳಿಸಿ ಶಾಂತಪಡಿಸಿದರು. ಅದನ್ನು ಕೇಳಿದ ರಾಜ ದಿವ್ಯದೇಶ ದರ್ಶನಕ್ಕಾಗಿ ತೀರ್ಥಯಾತ್ರೆಗೆ ಹೊರಟನು.

ರಾಜ ತೀರ್ಥಯಾತ್ರೆಗೆ ಹೊರಟ ಮೇಲೆ ದೇಗುಲದ ಮೂರ್ತಿಯ ಒಡವೆಗಳನ್ನು ಮಂತ್ರಿಯೋರ್ವರು ಕದ್ದರು. ತೀರ್ಥಯಾತ್ರೆ ಮುಗಿಸಿ ಬಂದ ನಂತರ ರಾಜನ ಬಳಿ ದೇಗುಲದ ಆಭರಣಗಳು ಕಳುವಾದ ಬಗ್ಗೆ ತಿಳಿಸಿ, ಆ ಕೆಲಸ ಮಾಡಿರುವುದು ಅರ್ಚಕರು ಎಂದು ಅರ್ಚಕರ ಮೇಲೆ ಅಪವಾದ ಹೊರಿಸಿದರು. ಅದನ್ನು ಕೇಳಿದ ರಾಜನು ಆ ಅಪವಾದವನ್ನು ಖಂಡಾತುಂಡವಾಗಿ ನಿರಾಕರಿಸಿದನು. ಅರ್ಚಕರ ಮೇಲೆ ಇಲ್ಲದ ಅಪವಾದ ಹೊರಿಸುತ್ತಿದ್ದೀರಿ, ಅರ್ಚಕರು ಆ ರೀತಿ ಮಾಡುವವರಲ್ಲ ಎಂದು ಬಹಳ ಬೇಸರ ಪಟ್ಟನು. ಒಂದು ಮಣ್ಣಿನ ಮಡಿಕೆಯಲ್ಲಿ ಕಾರ್ಕೋಟಕ ವಿಷಪೂರಿತ ಹಾವನ್ನು ಬಿಟ್ಟು ಆ ಮಡಿಕೆಯಲ್ಲಿ ತನ್ನ ಕೈಯನ್ನು ಇಡುತ್ತೇನೆ. ಒಂದು ವೇಳೆ ಅರ್ಚಕರು ಆಭರಣಗಳನ್ನು ಕದ್ದಿದ್ದರೆ ಆ ಹಾವು ನನ್ನನ್ನು ಕಚ್ಚಲಿ ಎಂದು ರಾಜನು

ವಿಷಪೂರಿತ ಹಾವನ್ನಿಟ್ಟಿರುವ ಮಡಿಕೆಯ ಒಳಗೆ ತನ್ನ ಕೈಯನ್ನು ಬಹಳ ಸಮಯದವರೆಗೆ ಇಟ್ಟನು. ಆದಾಗ್ಯೂ ವಿಷಪೂರಿತ ಹಾವು ರಾಜನಿಗೆ ಏನೂ ಮಾಡದೆ ಹೊರಬಂದು ರಾಜನಿಗೆ ಪ್ರದಕ್ಷಿಣೆ ಮಾಡಿ ನಮಸ್ಕರಿಸಿ ಹೊರಟುಬಿಟ್ಟಿತು. ಅದನ್ನು ಕಂಡು ಕಳ್ಳತನ ಮಾಡಿದ ಮಂತ್ರಿಯು ತನ್ನ ತಪ್ಪನ್ನು ಒಪ್ಪಿಕೊಂಡು ಮನ್ನಿಸುವಂತೆ ಕೇಳಿ ಅರ್ಚಕರ ಬಳಿ ಕ್ಷಮಾಪಣೆ ಕೇಳಿದನು. ಈ ಸನ್ನಿವೇಶದಿಂದ ವಿಚಲಿತನಾದ ರಾಜನು ತನ್ನ ಮಗನಾದ ದಿಡವಿರದನ್‌ಗೆ ಪಟ್ಟಾಭಿಷೇಕ ಮಾಡಿ ತಾನು ಸಂನ್ಯಾಸ ಸ್ವೀಕರಿಸಿ ದೇವರ ಕೃಪೆಗಾಗಿ ರಾಜ್ಯವನ್ನು ಬಿಟ್ಟು ಹೊರಟುಬಿಟ್ಟನು.

ನಮ್ಮಾಳ್ವಾರ್ ಅವತಾರ ಸ್ಥಳವಾದ ತಿರುಕ್ಕುರುಗೂರ್ ಹತ್ತಿರದ ಮನ್ನಾರ್‌ಕೋಯಿಲ್ ಎಂಬಲ್ಲಿ ದೇವರ ಸೇವೆ ಗೈಯುತ್ತಾ ಶ್ರೀಮನ್ನಾರಾಯಣನಿರುವ ವೈಕುಂಠಕ್ಕೆ ತೆರಳಿದರು.

**ಇವರು ಮಂಗಳಶಾಸನ ಮಾಡಿದ ಸ್ಥಳಗಳು :**

**1. ತಿರುವರಂಗಂ (ಶ್ರೀರಂಗಂ), 2. ತಿರುಕಣ್ಣಪುರಂ, 3. ತಿರುಚಿತ್ರಕೂಡಂ, 4. ತಿರುವಿತ್ತುವಕೋಡು, 5. ತಿರುವೇಂಕಟಂ (ತಿರುಪತಿ), 6. ತಿರು ಅಯೋಧಿ, 7. ತಿರುಪ್ಪಾರ್‌ಕಡಲ್ (ಕ್ಷೀರಸಮುದ್ರ).**

**8. ಪೆರಿಯಾಳ್ವಾರ್** :- ಇವರು ಕಲಿಯುಗ ಹುಟ್ಟಿದ 47ನೇ ವರ್ಷವಾದ ಕ್ರೋಧನ ಸಂವತ್ಸರ, ಜ್ಯೇಷ್ಠ ಮಾಸ, ಸ್ವಾತಿ ನಕ್ಷತ್ರ ಭಾನುವಾರದಂದು ಶ್ರೀವಿಲ್ಲಿಪುತ್ತೂರ್‌ನಲ್ಲಿ ಗರುಡ ಅಂಶವಾಗಿ ಜನಿಸಿದರು.

ಇವರಿಗೆ ಪೆರಿಯಾಳ್ವಾರ್, ಪಟ್ಟರ್‌ಪಿರಾಣ್, ವಿಷ್ಣು ಸಿದ್ಧನ್, ವಿಲ್ಲಿಪುತ್ತೂರಾರ್, ಮಾಲಾಕಾರರ್, ಪುದುವೈಕೋನ್, ಕಿಳಿಅರುತ್ತಾನ್ ಎನ್ನುವ ಮುಂತಾದ ಹೆಸರುಗಳುಂಟು.

ಇವರು ಬಾಲ್ಯದಿಂದಲೇ ವಿಷ್ಣುಭಕ್ತರಾಗಿದ್ದು ಶ್ರೀವಿಲ್ಲಿಪುತ್ತೂರಿನಲ್ಲಿ ವಡಭದ್ರಸಾಯಿ ಎಂಬ ಶಯನ ರೂಪದಲ್ಲಿರುವ ದೇಗುಲದ ಬಳಿ ಸುಗಂಧಭರಿತ ಹೂವಿನ ತೋಟವನ್ನಿಟ್ಟಿದ್ದರು. ಆ ತೋಟದಿಂದ ಹೂವುಗಳನ್ನು ಕೊಯ್ದು ದೇವರಿಗೆ ಅರ್ಪಿಸುವುದೇ ಪೆರಿಯಾಳ್ವಾರರ ಕಾಯಕವಾಗಿತ್ತು.

ಒಮ್ಮೆ ಮದುರೈ ಪಾಂಡ್ಯ ರಾಜನ ಸಭೆಯಲ್ಲಿ ಸರ್ವಧರ್ಮ ಸಮ್ಮೇಳನವು ನಡೆಯಿತು. ಆ ಸಭೆಯಲ್ಲಿ ಬಂಗಾರದ ಪಂಜರದಲ್ಲಿ 'ಕಿಳಿ'

(ಬಂಗಾರದ ಆಭರಣ) ವನ್ನು ಕಟ್ಟಲಾಗಿತ್ತು. ಸರ್ವ ಧರ್ಮ ಸಭೆಯಲ್ಲಿ ಯಾವ ಧರ್ಮ ಶ್ರೇಷ್ಠ, ಯಾವ ಧರ್ಮದ ದೇವರು ಶ್ರೇಷ್ಠ ಎಂಬುದನ್ನು ಪ್ರತಿಪಾದಿಸಬೇಕಿತ್ತು. ಎಲ್ಲರೂ ತಮ್ಮ ತಮ್ಮ ಧರ್ಮಗಳನ್ನು ಕುರಿತು ಹೇಳಬೇಕು ಯಾವ ಧರ್ಮ ಪ್ರವಚನ ನಡೆಯುವಾಗ ಆ ಕಿಳಿ ಕೆಳಗೆ ಬೀಳುತ್ತದೆಯೋ ಅದೇ ಧರ್ಮ ಶ್ರೇಷ್ಠವೆಂದು ರಾಜನು ಸೂಚಿಸಿದನು.

ಸಭೆಯಲ್ಲಿ ಅನೇಕ ಘಟಾನುಘಟಿ ವಿದ್ವಾಂಸರು ತಮ್ಮ ತಮ್ಮ ಧರ್ಮದ ಬಗ್ಗೆ ಪ್ರವಚನ ಮಾಡಿದರು. ಆಗ ಆ ಕಿಳಿಯು ಕೆಳಗೆ ಬೀಳಲಿಲ್ಲ. ಅಲ್ಲಿಯೇ ಇದ್ದ ಬಾಲಕನಾದ ವಿಷ್ಣುಸಿದ್ಧನ್ (ಪೆರಿಯಾಳ್ವಾರ್) ತಮ್ಮ ಧರ್ಮದ ಕುರಿತು ಹೇಳುತ್ತೇನೆಂದಾಗ ನೆರೆದಿದ್ದ ಸಭಿಕರೆಲ್ಲರೂ ನಕ್ಕು ಹಾಸ್ಯ ಮಾಡಿದರು. ಆದರೂ ವಿಚಲಿತನಾಗದ ವಿಷ್ಣುಸಿದ್ಧನ್ 'ವಿಷ್ಣುವನ್ನು ಸ್ತುತಿಸಿ ಪರಮದೈವ, ಪರಮಪುರುಷ, ಪುರುಷೋತ್ತಮ ನಾರಾಯಣನನ್ನು ಕುರಿತು ವೈಷ್ಣವ ಧರ್ಮವನ್ನು ಕುರಿತು ಸಭೆಯಲ್ಲಿ ಮಂಡಿಸಿ ಶ್ರೀಮನ್ ನಾರಾಯಣನೊಬ್ಬನೇ ಪರಮಪುರುಷ ಎಂದು ವಾದಿಸಿದರು. ಆಗ ಆ ಕಿಳಿಯು ಕೆಳಗೆ ಬಿದ್ದಿತು. ಅದೇ ಸಮಯದಲ್ಲಿ ವೈಕುಂಠದಿಂದ ವಿಷ್ಣು ಭಗವಾನನು ಲಕ್ಷ್ಮೀ ಸಮೇತ ಆಗಮಿಸಿ ಆಗಸದಲ್ಲಿ ಎಲ್ಲರಿಗೂ ದರ್ಶನವಿತ್ತನು. ವಿಷ್ಣುಸಿದ್ಧನ್ ಮಹಾವಿಷ್ಣುವನ್ನು ಕಂಡಕೂಡಲೇ 'ಪಲ್ಲಾಂಡು ಪಲ್ಲಾಂಡು' ಎಂಬ 12 ಪಾಶುರಗಳನ್ನು ಹಾಡಿದರು. (ಪುಟ..........ರಲ್ಲಿ ನೀಡಲಾಗಿದೆ.) ಇಂದಿಗೂ ಎಲ್ಲಾ ದಿವ್ಯ ದೇಶಗಳಲ್ಲಿಯೂ ಪ್ರಾತಃಕಾಲದಲ್ಲಿ ದೇಗುಲ ತೆರೆಯುವ ಸಂದರ್ಭದಲ್ಲಿ ಈ ಪಲ್ಲಾಂಡು ಪಲ್ಲಾಂಡು ಪಾಶುರಗಳನ್ನು ಹೇಳುತ್ತಾರೆ. ನಂತರ ವಿಷ್ಣುಸಿದ್ದನ್ ಆ ಕಿಳಿಯನ್ನು ತೆಗೆದುಕೊಂಡು ಹೋಗಿ ವಡಬದ್ರಸಾಯಿ ದೇಗುಲಕ್ಕೆ ಅರ್ಪಿಸಿದರು.

ತಮ್ಮ ಹೂವಿನ ತೋಟದಲ್ಲಿ ಒಮ್ಮೆ ತುಳಸಿ ಗಿಡದ ಬಳಿ ಮಗುವೊಂದು ಅಳುತ್ತಿರುವ ಶಬ್ದ ಕೇಳಿಸಿತು. ಅದನ್ನು ಕೇಳಿಸಿಕೊಂಡ ಆಳ್ವಾರ್ ಆ ಗಿಡದ ಬಳಿ ಬಂದು ನೋಡುತ್ತಾರೆ. ಅಲ್ಲಿ ಒಂದು ಹೆಣ್ಣು ಮಗುವೊಂದು ನಗುನಗುತ್ತಿರುತ್ತದೆ. ಸುತ್ತಮುತ್ತಾ ಮಗು ಯಾರದೆಂದು ನೋಡಿ ಯಾರೂ ಕಾಣದಾದಾಗ ತಾವೇ ಆ ಮಗುವನ್ನು ಎತ್ತಿಕೊಂಡು 'ಗೋದೈ' ಎಂಬ ಹೆಸರಿನಿಂದ ಮಗುವನ್ನು ಬೆಳೆಸುತ್ತಾರೆ. ಆ ಮಗುವು ಪ್ರತಿನಿತ್ಯ ಆನಂದವಾಗಿ ಸಂತೋಷವಾಗಿ ಬೆಳೆಯುತ್ತಿತ್ತು. ಅದನ್ನು ಕಂಡ ಆಳ್ವಾರರು ಆ ಮಗುವಿನ

ಮೇಲೆ ಅತ್ಯಂತ ಪ್ರೀತಿ, ಅಪ್ಯಾಯತೆಯನ್ನು ಹೊಂದಿದರು. ಇವರು ಕೃಷ್ಣಭಕ್ತರಾಗಿದ್ದು ಹೂವಿನ ಮಾಲೆಯನ್ನು ತಯಾರಿಸಿ ದೇವರಿಗೆ ಸಮರ್ಪಿಸುವುದೇ ಪರಮ ಕಾಯಕವೆಂದು ನಂಬಿದ್ದರು.

**ಇವರು ದಿವ್ಯದೇಶ ಮಾಡಿದ ಸ್ಥಳಗಳು :-**

**1. ಪರಮಪದಂ (ವೈಕುಂಠ), 2. ತಿರುಪ್ಪಾರ್‌ಕಡಲ್ (ಕ್ಷೀರಸಮುದ್ರ), 3. ಆಯ್‌ಪಾಡಿ (ಗೋಕುಲಂ) 4. ವಡಮದುರಾ, 5. ದ್ವಾರಕೈ, 6. ಕಂಡಂಎನುಂಕಡಿನಗರ್, 7. ವದರಿಯಾಶ್ರಮಮಂ (ಬದರಿನಾಥ), 8. ಸಾಲಗ್ರಾಮ (ಮುಕ್ತಿನಾಥ), 9. ಅಯೋಧಿ, 10. ತಿರುವೇಂಕಟಂ, 11. ತಿರುಕ್ಕುರುಂಗುಡಿ, 12. ತಿರುವಿಲ್ಲಿಪುತ್ತೂರ್, 13. ತಿರುಕ್ಕೋಟ್ಟಿಯೂರ್, 14. ತಿರುಮಾಲ್ ಇರುಂಸೋಲೈ, 15. ತಿರುಚಿತ್ರಕೂಡಂ, 16. ತಿರುಕಣ್ಣಪುರಂ, 17. ತಿರುಕ್ಕುಡಂದೈ, 18. ತಿರುಪೇರ್‌ನಗರ್, 19. ತಿರುವೆಲ್ಲರೈ, 20. ತಿರುವರಂಗಂ (ಶ್ರೀರಂಗಂ)**

**9. ಆಂಡಾಳ್ :-** ಇವರು ಕಲಿಯುಗದ 98ನೇ ವರ್ಷ, ಶುಕ್ಲ ಸಂವತ್ಸರ, ಆಷಾಢ ಮಾಸ, ಪುಬ್ಬಾ ನಕ್ಷತ್ರ, ಮಂಗಳವಾರದಂದು ಶ್ರೀ ಮಹಾಲಕ್ಷ್ಮಿಯೇ ಆಂಡಾಳ್ ಆಗಿ ಜನಿಸಿದರು. ತಿರುವಿಲ್ಲಿಪುತ್ತೂರ್‌ನ ವಿಷ್ಣುಸಿದ್ಧರ್ ಮಾಡಿದ್ದ ಹೂವಿನ ತೋಟದಲ್ಲಿ ತುಳಸಿ ಗಿಡದ ಕೆಳಗೆ ಜನ್ಮಿಸಿದರು. ಈ ಮಗುವನ್ನು ಕಂಡ ಪೆರಿಯಾಳ್ವಾರ್ ತಮ್ಮ ಸ್ವಂತ ಮಗುವಿನಂತೆ ಬಹಳ ಚೆನ್ನಾಗಿ 'ಗೋದೈ' ಎಂಬ ಹೆಸರಿನಿಂದ ಬೆಳೆಸಿದರು.

ಒಂದು ದಿನ ಬಾಲಕಿಯು ಚಿಂತಾಕ್ರಾಂತಳಾಗಿರುವುದನ್ನು ಕಂಡ ಪೆರಿಯಾಳ್ವಾರರು ಈ ರೀತಿ ಏಕಿದ್ದೀಯೆಂದು ಗೋದೈಯನ್ನು ಪ್ರಶ್ನೆ ಮಾಡುತ್ತಾರೆ. ಗೋದೈಯು ತಾನು ಮರಳಿನ ಮನೆ ಕಟ್ಟಿದ್ದು ಓರ್ವ ಸನ್ಯಾಸಿಯು ಆ ಮನೆಯನ್ನು ತಳ್ಳಿಕೊಂಡು ಹೋದರು ಎನ್ನುತ್ತಾಳೆ. ಆಗ ಆಳ್ವಾರರು 'ನಾರಾಯಣ ನಾರಾಯಣ' ಎನ್ನುತ್ತಾರೆ. ಅದನ್ನು ಕೇಳಿಸಿಕೊಂಡ ಗೋದೈ 'ಏನಪ್ಪಾ ನೀನೂ ಇದನ್ನೇ ಹೇಳುತ್ತಿದ್ದೀಯ, ಆ ಸನ್ಯಾಸಿಯೂ ನಾರಾಯಣ ನಾರಾಯಣ ಎಂದೇ ಹೇಳುತ್ತಿದ್ದರು. ಯಾರಪ್ಪಾ ಈ ನಾರಾಯಣ, ಶ್ರೀಕೃಷ್ಣ' ಎಂದು ಕೇಳಿದಳು. ಪೆರಿಯಾಳ್ವಾರರು ನಕ್ಕು 'ನೋಡಮ್ಮಾ, ನಾರಾಯಣ, ಶ್ರೀಕೃಷ್ಣನೇ ಸರ್ವಸ್ವ

ಅವನೇ ಪರಮಶ್ರೇಷ್ಠ, ಪರಮಪುರುಷ, ಆದಿಯೂ ಅವನೇ ಅಂತ್ಯವೂ ಅವನೇ, ಅವನು ನಿತ್ಯ ಚಿರಂಜೀವಿ, ಅವನಿಗೆ ನೀರಡಿಕೆಯಾಗುವುದಿಲ್ಲ, ಹಸಿವೆಯಾಗುವುದಿಲ್ಲ, ಆತ ಎಂದೆಂದಿಗೂ ಚಿರಂತನ ಚಿರನೂತನ ಸರ್ವವ್ಯಾಪಿಯಾದ ಭಗವಂತ' ಎಂದರು. ಅಂದಿನಿಂದ ಗೋದೈಯು ಕೃಷ್ಣನ ಮೇಲೆ ಧ್ಯಾನ, ಭಕ್ತಿ, ಮೋಹ ಪರವಶಳಾದಳು.

ಪೆರಿಯಾಳ್ವಾರರು ಹೂವಿನ ಮಾಲೆಯನ್ನು ತಯಾರಿಸಿ ದೇವರಿಗೆ ಸಮರ್ಪಿಸಲು ಮನೆಯಲ್ಲಿಡುತ್ತಿದ್ದರು. ಆಳ್ವಾರರು ಮನೆಯಲ್ಲಿಲ್ಲದ ಸಂದರ್ಭದಲ್ಲಿ ಗೋದೈ ಆ ಹೂವಿನ ಹಾರಗಳನ್ನು ತಾನೇ ಧರಿಸಿ, ಅಂದವಾದ ಸೀರೆಯನ್ನುಟ್ಟು ಕನ್ನಡಿಯಲ್ಲಿ ತನ್ನ ಬಿಂಬವನ್ನು ತಾನೇ ನೋಡಿಕೊಂಡು ಸಂತೋಷ ಪಡುತ್ತಿದ್ದಳು. ಈ ಹಾರಗಳನ್ನೆಲ್ಲಾ ಧರಿಸಿದ ಆ ಶ್ರೀಕೃಷ್ಣನು ಎಷ್ಟು ಸುಂದರನಾಗಿರಬಹುದೆಂದು ಮನಸ್ಸಿನಲ್ಲಿಯೇ ಕಲ್ಪಿಸಿಕೊಂಡು ಮೋಹಪರವಶಳಾದಳು. ಈ ಕಾರ್ಯವು ಪ್ರತಿನಿತ್ಯವೂ ನಡೆಯುತ್ತಿತ್ತು.

ಮದುವೆ ವಯಸ್ಸಿಗೆ ಬಂದ ಗೋದೈಯನ್ನು ಪೆರಿಯಾಳ್ವಾರರು 'ಮದುವೆಯಾಗಲು ಸಿದ್ಧವಿರುವೆಯಾ? ನಾನು ಮದುವೆ ಮಾಡಲು, ಮದುವೆ ಗಂಡನ್ನು ನೋಡಲು ಯೋಚಿಸುತ್ತಿದ್ದೇನೆ' ಎಂದು ಹೇಳಿದರು. ಆಗ ಗೋದೈಯು 'ನನಗೀಗಲೇ ಮದುವೆ ಬೇಡ. ನಾನು ಮಾನವರನ್ನು ಮದುವೆಯಾಗುವುದಿಲ್ಲ' ಎಂದು ಧನುರ್ಮಾಸದಲ್ಲಿ ತಿರುಪಾವೈ (ತಿರು=ಲಕ್ಷ್ಮಿ, ಪಾವೈ=ಕನ್ಯೆಯರು - ತಿರುಪ್ಪಾವೈ ) ವ್ರತವನ್ನು 30 ದಿನಗಳೂ ಆಚರಿಸಿದಳು.

ಮಾರ್ಗಳಿ ತಿಂಗಳ್ ಮದಿನಿರ್ರೆಂದ ನನ್ನಾಳ್ ಎಂಬ ಹಾಡುಗಳನ್ನು 30 ದಿನಗಳೂ ಬೆಳಗಿನ ಝಾವ ಆ ಊರಿನಲ್ಲಿರುವ ಎಲ್ಲ ಹೆಣ್ಣು ಮಕ್ಕಳೊಂದಿಗೆ ಸೇರಿ ಹಾಡಿ ಪಾವೈ ವ್ರತವನ್ನು ಮಾಡಿದರು. (ಪುಟ ........... ರಲ್ಲಿ ತಿರುಪ್ಪಾವೈ ನೀಡಲಾಗಿದೆ)

ಪೆರಿಯಾಳ್ವಾರರು ಗೋದೈಯನ್ನುದ್ದೇಶಿಸಿ 'ನಿನಗೆ ಮದುವೆಯಾಗಲು ಮನುಷ್ಯರು ಬೇಡವಾದರೆ, 108 ದಿವ್ಯದೇಶದಲ್ಲಿರುವ ಭಗವಂತನಲ್ಲಿ ನಿನಗೆ ಯಾರು ಬೇಕು?' ಎಂದು ಕೇಳಿ ಪ್ರತಿಯೊಂದು ದಿವ್ಯದೇಶ ದೇವರ ಹೆಸರನ್ನು ಹೇಳುತ್ತಾ ಹೋದರು. ಗೋದೈಯು ಪ್ರತಿಯೊಂದು ಹೆಸರಿಗೂ ಬೇಡವೆಂದು ತಲೆಯಾಡಿಸಿದರು. ಕಡೆಯಲ್ಲಿ ತಿರುವರಂಗಂನಲ್ಲಿರುವ ರಂಗನಾಥ ಹೆಸರನ್ನು

ಹೇಳುವಾಗ ಹೌದು ಹೌದು ಎಂದು ಗೋದೈ ಸಮ್ಮತಿಸಿದಳು. ಅದನ್ನು ಕೇಳಿದ ಪೆರಿಯಾಳ್ವಾರ್ 'ಇದೆಲ್ಲಾ ಆಗುವ ವಿಷಯವೇ? ಹುಲು ಮಾನವರಾದ ನಾವೆಲ್ಲಿ? ದೇವರಾದ ರಂಗನಾಥರೆಲ್ಲಿ?' ಎಂದು ಮಲಗಿಕೊಂಡು ಧ್ಯಾನದಲ್ಲಿ ಮುಳುಗಿದರು.

ಅಂದಿನ ದಿನ ರಾತ್ರಿ ಕನಸಿನಲ್ಲಿ ಭಗವಂತನು ಬಂದು ನಿಮ್ಮ ಮಗಳನ್ನು ನಾಳೆ ಬೆಳಗ್ಗೆ ಮದುವಣಗಿತ್ತಿಯಾಗಿ ಅಲಂಕರಿಸಿ ತಿರುವರಂಗಂಗೆ ಕರೆದುಕೊಂಡು ಬರಲು ಆಜ್ಞಾಪಿಸಿದರು. ಬೆಳಗ್ಗೆ ಎದ್ದ ತಕ್ಷಣ ಗೋದೈಗೆ ನನಗೆ ಕನಸು ಬಂದಿತೆಂದು ತಿಳಿಸಿದರು. ಅದಕ್ಕುತ್ತರವಾಗಿ ಗೋದೈ ನನಗೂ ಒಂದು ಕನಸು ಬಂದಿತು ಎಂದಳು. ಆಳ್ವಾರರು 'ಮೊದಲು ನಿನಗೆ ಏನು ಕನಸು ಬಿತ್ತೆಂದು ಹೇಳು' ಎಂದು ಕೇಳಿದರು. ಕನಸಿನಲ್ಲಿ ಹೂವಿನ ತೋರಣವಿರುವ ಮದುವೆ ಮಂಟಪ ಕಾಣಿಸಿ, ಮೇಳದ ಶಬ್ದವು ಕೇಳಿಸಿ ಆ ರಂಗನಾಥನು ನನ್ನ ಕೈಯನ್ನು ಹಿಡಿದುಕೊಂಡು ಹೂವಿನ ಹಾರ ಧರಿಸಿ ಸಪ್ತಪದಿ ತುಳಿದ ಅನುಭವವಾಯಿತೆಂದು ಗೋದೈ ತಿಳಿಸಿದಳು. ಪೆರಿಯಾಳ್ವಾರರೂ ತನಗೂ ಅದೇ ಕನಸು ಬಿತ್ತೆಂದು ಹೇಳಿದರು. ಈ ವಿಷಯ ತಿಳಿದ ಊರಿನ ಜನರು ಶ್ರೀವಿಲ್ಲಿಪುತ್ತೂರಿನಿಂದ ತಿರುವರಂಗಂವರೆಗೂ ಇರುವ ರಸ್ತೆಗಳನ್ನು ಹೂವಿನ ಹಾರ, ತೋರಣಗಳಿಂದ ಅಲಂಕರಿಸಿದರು. ಗೋದೈಯನ್ನು ಮದುವಣಗಿತ್ತಿಯನ್ನಾಗಿ ಅಲಂಕರಿಸಿ ವಾದ್ಯ ಮೇಳಗಳ ಸಮೇತ ಮುತ್ತಿನ ಪಲ್ಲಕ್ಕಿಯಲ್ಲಿ ಕುಳ್ಳರಿಸಿ ಪೆರಿಯಾಳ್ವಾರ್‌ರೊಂದಿಗೆ ತಿರುವರಂಗಂಗೆ ಹೊರಟರು.

ತಿರುವರಂಗಂ ದೇಗುಲದ ಅರ್ಚಕರ ಕನಸಿನಲ್ಲಿಯೂ ಶ್ರೀ ರಂಗನಾಥನು ಬಂದು ಗೋದೈ ವಿಷಯ ತಿಳಿಸಿ ಅವರನ್ನು ಸ್ವಾಗತಿಸಲು ತಿಳಿಸಿದನು. ಆಗ ಅರ್ಚಕರು ಮರುದಿನ ಬೆಳಗ್ಗೆ ದೇಗುಲವನ್ನು ಅಲಂಕರಿಸಿ, ಆನೆ ಸಮೇತ ಪೂರ್ಣಕುಂಭದೊಂದಿಗೆ ಗೋದೈ ಮತ್ತು ಊರಿನ ಜನರನ್ನು ಸ್ವಾಗತಿಸಿದರು.

ದೇಗುಲ ಪ್ರವೇಶಿಸಿದ ಗೋದಾ ದೇವಿ ನೇರ ಗರ್ಭಗುಡಿಯನ್ನು ಪ್ರವೇಶಿಸಿ ರಂಗನಾಥನ ಪಾದಪದ್ಮಗಳಿಗೆ ನಮಸ್ಕರಿಸಿ ಜ್ಯೋತಿರೂಪಿಯಾಗಿ ಭಗವಂತನ ಹೃದಯುವನ್ನು ಸೇರಿಕೊಂಡರು. ಆಂಡವನನ್ನು (ಭಗವಂತನನ್ನು) ಮದುವೆಯಾದ್ದರಿಂದ ಗೋದಾದೇವಿ ಆಂಡಾಳ್ ಎಂದು ಹೆಸರು ಪಡೆದರು. ಆ ಸಂದರ್ಭದಲ್ಲಿ ಲಕ್ಷ್ಮೀ ಸಮೇತನಾದ ನಾರಾಯಣನು ಪ್ರತ್ಯಕ್ಷರಾಗಿ ಅಲ್ಲಿದ್ದ

ಪೆರಿಯಾಳ್ವಾರ್ ಮತ್ತು ನೆರೆದಿದ್ದ ಜನರನ್ನುದ್ದೇಶಿಸಿ ಇಷ್ಟು ದಿನ ನಿಮ್ಮಲ್ಲಿ ಬೆಳೆದ ಗೋದೈ ಬೇರಾರೂ ಅಲ್ಲ ಸ್ವತಃ ಮಹಾಲಕ್ಷ್ಮಿಯೇ. ಇಂದಿನಿಂದ ನನ್ನಲ್ಲಿಯೇ ಇರುತ್ತಾಳೆ. ನೀವು ನಿಮ್ಮ ಊರಿಗೆ ತೆರಳಿ ವಡಪದ್ರಸಾಯಿಗೆ ಕೈಂಕರ್ಯವನ್ನು ಮಾಡಿ ದೇವರ ಅನುಗ್ರಹಕ್ಕೆ ಪಾತ್ರರಾಗಿ' ಎಂದು ಹೇಳುತ್ತಾರೆ.

**ಇವರು ಮಂಗಳಶಾಸನ ಮಾಡಿದ ಸ್ಥಳಗಳು :**

**1. ತಿರುವರಂಗಂ, 2. ತಿರುಕಣ್ಣಪುರಂ, 3. ತಿರುಪ್ಪಾರ್‌ಕಡಲ್, 4. ವಡಮದುರೈ, 5. ತಿರುವಾಯ್‌ಪಾಡಿ, 6. ತಿರುಮಾಳಿರುಂಸೋಲೈ, 7. ತಿರುವೇಂಕಟಂ, 8. ತಿರುದ್ವಾರಕೈ, 9. ತಿರುವಿಲ್ಲಿಪುತ್ತೂರ್**

**10. ತೊಂಡರಡಿಪೊಡಿ ಆಳ್ವಾರ್** : – ಇವರು ಕಲಿಯುಗ ಹುಟ್ಟಿದ ನಂತರ 289ನೇ ವರ್ಷದ ಪರಾಭವ ಸಂವತ್ಸರ ಧನುರ್‌ಮಾಸ, ಜ್ಯೇಷ್ಠಾ ನಕ್ಷತ್ರ ಮಂಗಳವಾರ ಮಹಾವಿಷ್ಣುವಿನ ಹೂವಿನ ಹಾರದ ಅಂಶದಲ್ಲಿ ತಂಜಾವೂರು ಜಿಲ್ಲೆಯಲ್ಲಿ ಮಂಡಂಗುಡಿ ಗ್ರಾಮದಲ್ಲಿ ಜನಿಸಿದರು. ಇವರಿಗೆ ವಿಪ್ರ ನಾರಾಯಣ ಎಂಬ ಹೆಸರೂ ಉಂಟು.

ಇವರದೂ ಸಹ ಪೆರಿಯಾಳ್ವಾರರ ರೀತಿ ಹೂಮಾಲೆ ತಯಾರಿಸಿ ದೇವರಿಗೆ ಸಮರ್ಪಿಸುವ ಕಾಯಕ. ತಿರುವರಂಗಂನಲ್ಲಿ ವಿವಿಧ ಸುವಾಸನೆಗಳುಳ್ಳ, ವಿವಿಧ ರಂಗಿನ, ವಿವಿಧ ಮಾದರಿಯ ಅಂದರೆ ಕೇದಿಗೆ, ಸಂಪಿಗೆ, ಮಾಲತಿ, ಅರವಿಂದ, ಸಂಪಂಗಿ, ಮಲ್ಲಿಗೆ ಇನ್ನೂ ವಿವಿಧ ರೀತಿಯ ಹೂಗಳನ್ನು ಬೆಳೆಸಿ, ಅದನ್ನು ಮಾಲೆ ಮಾಡಿ ರಂಗನಾಥನಿಗೆ ಅರ್ಪಿಸಿ, ಆನಂದಿಸುವುದೇ ಇವರ ದಿನಚರಿ.

ತಿರುಕ್ಕರಂಬನೂರ್‌ನಲ್ಲಿ ವಾಸಿಸುತ್ತಿದ್ದ ದೇವದೇವಿ ಎನ್ನುವ ಸಹೋದರಿಯರಿಬ್ಬರು ದಾಸಿಯರು ಚೋಳ ರಾಜನ ಬಳಿ ನಾಟ್ಯ ಮಾಡಿ ಬಹುಮಾನ ಪಡೆದು ಮನೆಗೆ ಹಿಂತಿರುಗುತ್ತಿರುವಾಗ ಈ ಸುಂದರವಾದ ಹೂ ತೋಟವನ್ನು ನೋಡಿ ಆನಂದದಿಂದ ಮೈ ಮರೆತು ಅಲ್ಲಿಯೇ ನಿಂತರು. ಅದನ್ನು ಕಂಡು ದೇವದೇವಿ ಇದ್ಯಾರ ತೋಟ ಎಂದು ಕೇಳಿದಾಗ ತಂಗಿಯು ಇದು ವಿಪ್ರನಾರಾಯಣನ ಹೂವಿನ ತೋಟ. ಅವರು ಇಲ್ಲಿರುವ ಹೂಗಳನ್ನು ಕೊಯ್ದು ದೇವರಿಗೆ ಮಾಲೆ ಮಾಡಿ ಅರ್ಪಿಸುವುದೇ ಅವರ ಕಾಯಕ ಎಂದು ತಿಳಿಸಿದಳು. ಅದೇ ಸಮಯಕ್ಕೆ ವಿಪ್ರನಾರಾಯಣನು ಹೂಗಳನ್ನು ಕೊಯ್ದು ತನ್ನ ಕುಟೀರಕ್ಕೆ ಕೊಂಡೊಯ್ಯುತ್ತಿದ್ದನು. ಅಲ್ಲಿಯೇ ನಿಂತಿದ್ದ ಸುಂದರವಾದ, ದೇವಲೋಕದ ಅಪ್ಸರೆಯರಂತಿದ್ದ ದೇವದೇವಿ ಸಹೋದರಿಯರನ್ನು ಕಣ್ಣೆತ್ತಿಯೂ ನೋಡದೆ ಹೊರಟನು. ಅದನ್ನು ಕಂಡ ದೇವದೇವಿಯು ತಂಗಿಯ ಬಳಿ

'ನೋಡು ಅವರು ನಮ್ಮನ್ನು ನೋಡದೇ ಹಾಗೇ ಹೋಗುತ್ತಿದ್ದಾರೆ. ಅವರನ್ನು ನಾನು ವಶಪಡಿಸಿಕೊಳ್ಳುವೆ' ಎಂದಳು. ಆಗ ತಂಗಿಯು 'ವಿಪ್ರನಾರಾಯಣನು ಹುಡುಗಿಯರ ವಾಸನೆಯನ್ನೂ ಸಹ ನೋಡುವುದಿಲ್ಲ. ಅದು ನಿನ್ನ ಕೈಯಿಂದ ಆಗುವುದಿಲ್ಲ' ಎಂದು ತಿಳಿಸಿದಳು. ಅದಕ್ಕೆ ದೇವದೇವಿಯು 'ನೋಡು ನಾನು ಈ ವಿಪ್ರನಾರಾಯಣನನ್ನು ನನ್ನ ವಶ ಮಾಡಿಕೊಳ್ಳುವೆ. ಇದು ನನ್ನ ಪಂಥ. ನಾನು ವಶ ಮಾಡಿಕೊಂಡರೆ ನೀನು ನನ್ನ ಬಳಿ ಆರು ತಿಂಗಳು ದಾಸಿಯಾಗಿ ನನ್ನ ಸೇವೆ ಮಾಡಬೇಕು. ಇಲ್ಲದಿದ್ದಲ್ಲಿ ನಾನು ನಿನ್ನ ಬಳಿ ಆರು ತಿಂಗಳ ಕಾಲ ದಾಸಿಯಾಗಿ ಸೇವೆ ಮಾಡುತ್ತೇನೆ.' ಎಂದು ಪಂಥ ಹಾಕಿದಳು. ಅದಕ್ಕೆ ತಂಗಿಯೂ ಒಪ್ಪಿದಳು. ನಂತರ ದೇವದೇವಿಯು ತನ್ನ ಮೈಮೇಲಿದ್ದ ಆಭರಣಗಳನ್ನೆಲ್ಲಾ ತೆಗೆದು ತಂಗಿಯ ಕೈಗೆ ಕೊಟ್ಟು ಕಳುಹಿಸಿದಳು.

ದೇವದೇವಿಯು ವಿಪ್ರನಾರಾಯಣನ ತೋಟದ ಬಳಿ ಸೂಕ್ತ ಸಮಯಕ್ಕಾಗಿ ಹಲವು ದಿನಗಳಿಂದ ಕಾಯುತ್ತಿದ್ದಳು. ಒಮ್ಮೆ ಜೋರಾದ ಮಳೆ ಬಂದಿತು. ಮಳೆಯಲ್ಲಿ ತೊಯ್ದಿರುವ ಆಕೆಯನ್ನು ಕಂಡ ವಿಪ್ರನಾರಾಯಣನು ತನ್ನ ಗುಡಿಸಿಲಿನ ಒಳಗೆ ಬಂದು ತಂಗಲು ಹೇಳಿದನು. ಮಳೆಯಿಂದ ನೆಂದಿರುವ ದೇಹವನ್ನು ಕಂಡು ವಿಪ್ರನಾರಾಯಣನು ತನ್ನ ಬಳಿಯಿದ್ದ ವಸ್ತ್ರವನ್ನು ನೀಡಿ ಬಟ್ಟೆ ಬದಲಾಯಿಸಿಕೊಳ್ಳಲು ಹೇಳಿದನು. ಅದೇ ಸಮಯಕ್ಕಾಗಿ ಕಾಯುತ್ತಿದ್ದ ದೇವದೇವಿಯು ಆತನು ಕೊಟ್ಟ ವಸ್ತ್ರವನ್ನು ಉಟ್ಟುಕೊಂಡು ಹೊರಗೆ ಬಂದಳು. ದೇವಲೋಕದ ಅಪ್ಸರೆಯಂತೆ, ರತಿಯಂತೆ ಆಕೆಯ ಅಂಗಸೌಷ್ಠವವು ಸ್ಪಷ್ಟವಾಗಿ ಕಾಣುವಂತೆ ವಸ್ತ್ರವನ್ನು ಧರಿಸಿ ಹೊರಗೆ ಬಂದು, ವಿಪ್ರನಾರಾಯಣನ ಕಾಲಿಗೆ ಬಿದ್ದು ನಿಮ್ಮನ್ನು ಬಿಟ್ಟು ನಾನು ಹೋಗುವುದಿಲ್ಲ. ನನ್ನನ್ನು ಆ ನಾರಾಯಣನೇ ತಮ್ಮ ಸೇವೆಗಾಗಿ ಕಳುಹಿಸಿರುವನು' ಎಂದು ಅನೃತವಾಡಿದಳು. ಆಗ ವಿಪ್ರನಾರಾಯಣನು ಆಕೆಯ ಕೈಹಿಡಿದು ಮೇಲೆತ್ತಿ ಆಲಂಗಿಸಿಕೊಂಡನು. ಅವಳ ಮಾತನ್ನು ನಂಬಿದ ವಿಪ್ರನಾರಾಯಣನು ಆಕೆಯನ್ನು ತನ್ನ ಗುಡಿಸಲಲ್ಲಿಯೇ ಇರಲು ಹೇಳಿದನು. ಇದನ್ನು ಕಂಡ ವಿಪ್ರನಾರಾಯಣನ ಶಿಷ್ಯನು ತಾವು ಮಾಡುತ್ತಿರುವುದು ತಪ್ಪು, ಅವಳು ಸುಳ್ಳು ಹೇಳುತ್ತಿದ್ದಾಳೆ. ನೀವು ಯಾವುದೇ ಸಮಯದಲ್ಲೂ ಆಕೆಯನ್ನು ನಂಬಬೇಡಿ ಎಂದು ಹಿತವಚನ ಮಾಡಿದರೂ ವಿಪ್ರನಾರಾಯಣನಿಗೆ ಶಿಷ್ಯನ ಬುದ್ಧಿವಾದ ರುಚಿಸಲಿಲ್ಲ. ಆಕೆಯೂ ಆತನೂ ಆಕರ್ಷಿತರಾಗಿ ಆನಂದದಿಂದ ಮೋಹಿತರಾದರು.

ಒಂದು ದಿನ ಆಕೆಯು ತನ್ನ ತಂಗಿ, ತಾಯಿಯನ್ನು ನೋಡಲು ತನ್ನ ಮನೆಗೆ ಹೋಗಿ ಬರುವುದಾಗಿ ತಿಳಿಸಿದಾಗ ವಿಪ್ರನಾರಾಯಣನು ಬಹಳ ವ್ಯಾಕುಲನಾದನು. ಬೇಗ ವಾಪಸ್ ಬರಬೇಕೆಂದು ತಾಕೀತು ಮಾಡಿದನು.

ಅದಕ್ಕೆ ಒಪ್ಪಿ ಆಕೆ ತನ್ನ ತಾಯಿಯ ಮನೆಗೆ ಹೊರಟು ತುಂಬಾ ದಿನಗಳಾದರೂ ಹಿಂತಿರುಗಿ ಬರಲೇ ಇಲ್ಲ. ಇತ್ತ ಆಕೆಯ ನಿರೀಕ್ಷೆಯಲ್ಲಿದ್ದ ವಿಪ್ರನಾರಾಯಣನು ಆಕೆಯನ್ನು ಹುಡುಕಿಕೊಂಡು ಆಕೆಯ ಮನೆಗೇ ಹೊರಟನು. ಆಗ ಅಲ್ಲಿ ಆಕೆಯು ಇರಲಿಲ್ಲ. ಆಕೆಯ ತಾಯಿ ಇದ್ದರು. ಆಕೆಯು 'ನೀವು ಸಂನ್ಯಾಸಿ, ನಿಮ್ಮ ಬಳಿ ಏನೂ ಇಲ್ಲ. ನಿಮ್ಮನ್ನು ಕಂಡರೆ ಇಷ್ಟವಿಲ್ಲ ಎಂದು ದೇವದೇವಿಯು ಹೇಳಿದ್ದಾಳೆ. ನೀವು ಇಲ್ಲಿಗೆ ಬರಬೇಡಿ' ಎಂದು ಬೈಯ್ದು ಕಳಿಹಿಸಿದರು. ಅದೇ ಯೋಚನೆಯಲ್ಲಿ ಆ ಊರಿನ ಪಾಳು ಮಂಟಪದಲ್ಲಿ ಕುಳಿತನು.

ಅದೇ ಸಮಯಕ್ಕೆ ಆ ಬೀದಿಯಲ್ಲಿ ಶ್ರೀ ನಾರಾಯಣ ಮಹಾಲಕ್ಷ್ಮಿಯ ಮೆರವಣಿಗೆ ಬರುತ್ತಿತ್ತು. ಚಿಂತೆಯಲ್ಲಿದ್ದ ವಿಪ್ರನಾರಾಯಣನನ್ನು ಕಂಡ ಮಹಾಲಕ್ಷ್ಮಿಯು ನಾರಾಯಣನ ಬಳಿ 'ಯಾರೀತ? ಏಕೆ ಹೀಗಿದ್ದಾನೆ?' ಎಂದು ಕೇಳಲು ಅದಕ್ಕುತ್ತರವಾಗಿ ನಾರಾಯಣನು 'ಈತ ನನ್ನ ಭಕ್ತ. ದೇವದೇವಿಯಲ್ಲಿ ಮೋಹಗೊಂಡು ಆಕೆಯನ್ನು ಹುಡುಕಿಕೊಂಡು ಬಂದಿದ್ದಾನೆ. ಆಕೆಯ ತಾಯಿ ಇವನನ್ನು ನಿಂದಿಸಿ ಕಳುಹಿಸಿದ್ದಾಳಾದ್ದರಿಂದ ಆತನು ಈ ರೀತಿ ಇದ್ದಾನೆ.' ಎಂದು ತಿಳಿಸಿದನು.

ನಂತರ ದೇವರು ತಮ್ಮ ಭಕ್ತರ ಅಭೀಷ್ಟೆಯನ್ನು ತೀರಿಸಲು ದೇಗುಲದಲ್ಲಿದ್ದ ಒಂದು ಬಂಗಾರದ ಆಭರಣವನ್ನು ಕೊಂಡೊಯ್ದು ವಿಪ್ರನಾರಾಯಣನ ಶಿಷ್ಯನ ರೂಪದಲ್ಲಿ ದೇವದೇವಿಯ ತಾಯಿಯ ಕೈಗೆ ಕೊಟ್ಟರು. ಆನಂತರ ದೇವದೇವಿಯು ಮನೆಗೆ ಬಂದು ವಿಷಯವನ್ನು ಅರಿತು ತನ್ನ ತಾಯಿಗೇ ಬೈದಳು.

ಆಭರಣ ಕಳುವಾದ ಸುದ್ದಿ ಊರಲ್ಲೆಲ್ಲಾ ಹಬ್ಬಿತು. ರಾಜ ಸಭೆ ಸೇರಿತು. ಆಭರಣಕ್ಕಾಗಿ ಊರಲ್ಲೆಲ್ಲಾ ಶೋಧ ಕಾರ್ಯ ನಡೆಯಿತು. ದೇವದೇವಿಯ ಮನೆಯಲ್ಲಿ ಆಭರಣ ದೊರೆತಾಗ ರಾಜಭಟರು ದೇವದೇವಿಯ ಕುಟುಂಬ ಮತ್ತು ವಿಪ್ರನಾರಾಯಣನನ್ನು ವಿಚಾರಣೆಗೆ ಎಳೆದೊಯ್ದರು. ವಿಚಾರಣೆಯಲ್ಲಿ ದೇವದೇವಿಯ ತಾಯಿ ವಿಪ್ರನಾರಾಯಣನ ಶಿಷ್ಯನೇ ಇದನ್ನು ತಂದು ಕೊಟ್ಟನೆಂದು ಹೇಳಿದಳು. ಆದರೆ ಶಿಷ್ಯನು ನಾನು ದೇವರ ಸೇವೆ ಮಾಡುತ್ತಿದ್ದೆ. ನನಗೇನೂ ತಿಳಿಯದೆಂದನು. ಆನಂತರ ಭಗವಂತನೇ ಬಂದು ಆ ಕೆಲಸ ಮಾಡಿದ್ದು ನಾವೇ. ನನ್ನ ಅಂತರಂಗಭಕ್ತರ ಅಭೀಷ್ಟೆ ತೀರಿಸುವುದೇ ನಮ್ಮ ಕರ್ತವ್ಯವೆಂದು ತಿಳಿಸಿ ಎಲ್ಲರಿಗೂ ದರ್ಶನವಿತ್ತು ಮಾಯವಾದರು. ತದನಂತರ ದೇವದೇವಿ, ವಿಪ್ರನಾರಾಯಣರು ದೇವರ ಸೇವೆ ಮಾಡುತ್ತಾ ಕಾಲ ಕಳೆದರು.

**ಇವರು ಮಂಗಳಶಾಸನ ಮಾಡಿದ ಸ್ಥಳಗಳು :**

**1. ತಿರುವರಂಗಂ, 2. ತಿರು ಅಯೋಧಿ 3. ತಿರುಪ್ಪಾರ್‌ಕಡಲ್**

**11. ತಿರುಪ್ಪಾಣ್ ಆಳ್ವಾರ್** :- ಇವರು ತಿರುಚನಾಪಲ್ಲಿಂಯು ತಿರುಉರಯೂರ್‌ನಲ್ಲಿ ಕಲಿಯುಗ ಪ್ರಾರಂಭವಾಗಿ 343ನೇ ವರ್ಷ, ತುನ್ಮದಿ ಸಂವತ್ಸರ, ಕಾರ್ತಿಕ ಮಾಸ, ರೋಹಿಣಿ ನಕ್ಷತ್ರ ಬುಧವಾರ ಶ್ರೀವತ್ಸ ಅಂಶವಾಗಿ ಪಾಣರ್ ಎಂಬ ಹೆಸರಿನಿಂದ ಜನ್ಮಿಸಿದರು.

ಇವರನ್ನು ಕೀಳುಜಾತಿಯವರೆಂದು ಕರೆಯುತ್ತಾರೆ. ಇವರು ತಂಬೂರಿ ನಾದ ಮಾಡುತ್ತಾ ಹಾಡುತ್ತಿದ್ದರು. ಇವರನ್ನು ದೇಗುಲದ ಒಳಗೆ ಸೇರಿಸುತ್ತಿರಲಿಲ್ಲ.

ಒಮ್ಮೆ ಕಾವೇರಿ ನದಿ ತೀರದ ಅಮ್ಮಾ ಮಂಟಪದಲ್ಲಿ ತಂಬೂರಿ ನಾದ ಮಾಡುತ್ತಾ ರಂಗನಾಥನ ಧ್ಯಾನ ಮಾಡುತ್ತಾ ಪಾಣರ್ ಕುಳಿತಿದ್ದರು. ಅದೇ ಸಮಯಕ್ಕೆ ದೇಗುಲದ ಅರ್ಚಕರಾಗಿದ್ದ ಸಾರಂಗರು ದೇವರ ಅಭಿಷೇಕಕ್ಕಾಗಿ ನೀರನ್ನು ತರಲು ಕಾವೇರಿ ನದಿ ಬಳಿ ಬಂದಾಗ ಪಾಣರ್ ಅಡ್ಡವಿದ್ದನು. ಸಾರಂಗರ ಶಿಷ್ಯರು ಆತನನ್ನು ಎಬ್ಬಿಸಲು ಪ್ರಯತ್ನಿಸಿದರೂ ಆತ ಕದಲಲಿಲ್ಲ. ಕೋಪಗೊಂಡ ಸಾರಂಗರು ಒಂದು ಕಲ್ಲನ್ನು ತೆಗೆದು ಪಾಣರ್ ಮೇಲೆ ಬೀಸಿದರು. ಪಾಣರ್ ತಲೆಯ ಮೇಲೆ ಕಲ್ಲು ಬಿದ್ದು ರಕ್ತಸ್ರಾವ ಆಯಿತು. ತಕ್ಷಣ ಎಚ್ಚರಗೊಂಡ ಪಾಣರ್ ಅಯ್ಯೋ ನನ್ನಿಂದ ನಿಮ್ಮ ಕಾರ್ಯಕ್ಕೆ ಅಡ್ಡವಾಯಿತೇ ಎಂದು ನೊಂದುಕೊಂಡು ದಾರಿ ಬಿಟ್ಟನು. ಸಾರಂಗ ಕಾವೇರಿ ನೀರನ್ನು ತೆಗೆದುಕೊಂಡು ದೇಗುಲಕ್ಕೆ ಬಂದು ಅಭಿಷೇಕ ಮಾಡಲೋಸುಗ ದೇವರನ್ನು ನೋಡಿದಾಗ ದೇವರ ಹಣೆಯಲ್ಲಿ ರಕ್ತಸ್ರಾವವಾಗುತ್ತಿತ್ತು. ಇದನ್ನು ಕಂಡ ಸಾರಂಗ ಮೂರ್ಛಿತರಾಗಿ ಬಿದ್ದರು.

ಅಂದು ರಾತ್ರಿ ಕನಸಿನಲ್ಲಿ ದೇವರು ಸಾರಂಗರಿಗೆ ಪಾಣರ್‌ನನ್ನು ನಿನ್ನ ಭುಜದ ಮೇಲೆ ಎತ್ತಿಕೊಂಡು ದೇಗುಲಕ್ಕೆ ಕರೆದುಕೊಂಡು ಬರಲು ಆದೇಶವಿತ್ತರು. ಅದರಂತೆ ಸಾರಂಗರು ಕಾವೇರಿ ನದಿ ತೀರಕ್ಕೆ ಹೋಗಿ ಪಾಣರ್‌ನನ್ನು ಕಂಡು ಆತನಿಗೆ ವಿಷಯ ತಿಳಿಸಿ ಆತನನ್ನು ತನ್ನ ಭುಜದ ಮೇಲೆ ಹೊತ್ತುಕೊಂಡು ದೇಗುಲಕ್ಕೆ ಬಂದರು. ದೇವರನ್ನು ಕಂಡ ಕೂಡಲೇ ಪಾಣರ್ ಜ್ಯೋತಿ ರೂಪದಲ್ಲಿ ರಂಗನಾಥನಲ್ಲಿ ಲೀನವಾದರು.

**ಇವರು ಮಂಗಳಶಾಸನ ಮಾಡಿದ ಸ್ಥಳಗಳು :**

1. **ತಿರುವರಂಗಂ**, 2. **ತಿರುವೇಂಕಟಂ**, 3. **ತಿರುಪರಮಪದಂ**

**12. ತಿರುಮಂಗೈ ಆಳ್ವಾರ್** : – ಕಲಿಯುಗ 398ನೇ ವರ್ಷ, ನಳ ಸಂವತ್ಸರ, ಕಾರ್ತಿಕ ಮಾಸ, ಕೃತ್ತಿಕಾ ನಕ್ಷತ್ರ, ಗುರುವಾರ ನಾರಾಯಣನ ಬಿಲ್ಲು ಅಂಶವಾಗಿ ಜನಿಸಿದರು. ಇವರು ನಾಲ್ಕೂ ಯುಗಗಳಲ್ಲಿ ಜನಿಸಿ ಮೋಕ್ಷಕ್ಕಾಗಿ

ಪರಿತಪಿಸಿ ಕಲಿಯುಗದಲ್ಲಿ ಮೋಕ್ಷ ಪ್ರಾಪ್ತಿಯಾಯಿತು.

ಬ್ರಹ್ಮನ ಐದನೇ ಮಗನಾದ ಕರ್ತಮ ಪ್ರಜಾಪತಿಯು ತನಗೆ ದೇವ ಜನ್ಮವೂ ಬೇಡ, ದೇವ ರೂಪವೂ ಬೇಡ. ಯಾವಾಗಲೂ ಶಾಶ್ವತವಾಗಿ ನಾರಾಯಣನ ಸಾನ್ನಿಧ್ಯದಲ್ಲೇ ಇರಬೇಕೆಂದು ತಪಸ್ಸು ಮಾಡುತ್ತಿದ್ದನು. ಅದನ್ನು ನೋಡಿಯೂ ನೋಡದಂತೆ ನಾರಾಯಣನು ಇರುವಾಗ ಮಹಾಲಕ್ಷ್ಮಿಗೆ ಕೋಪ ಬಂದು ತಿರುನಗರಿ ಎಂಬಲ್ಲಿ ತಾವರೆ ಹೂವಿನ ಕೊಳದಲ್ಲಿದ್ದ ತಾವರೆಯ ಹೂವಿನಲ್ಲಿ ಸೇರಿಕೊಂಡಳು. ನಾರಾಯಣನು ಲಕ್ಷ್ಮಿಯನ್ನು ಅರಸುತ್ತಾ ಭೂಲೋಕಕ್ಕೆ ಬಂದು ತಿರುನಗರಿ ತಾವರೆ ಕೊಳದ ಬಳಿ ಬಂದು ನೋಡಿದಾಗ ಯಾವೊಂದೂ ತಾವರೆ ಹೂಗಳು ಅರಳಿರಲಿಲ್ಲ. ಬಲಗಣ್ಣನ್ನು ಮುಚ್ಚಿಕೊಂಡು ಚಂದ್ರನಾಗಿರುವ ಎಡಗಣ್ಣಿನಿಂದ ಆ ಹೂಗಳನ್ನು ನೋಡಿದರೂ ಆ ಹೂಗಳು ಆರಳಲಿಲ್ಲ. ಎಡಗಣ್ಣನ್ನು ಮುಚ್ಚಿ ಸೂರ್ಯನಾಗಿರುವ ಬಲಗಣ್ಣಿನಿಂದ ಆ ಹೂಗಳನ್ನು ನೋಡಿದಾಗ ಒಂದೇ ಒಂದು ಹೂ ಬಿಟ್ಟು ಮಿಕ್ಕೆಲ್ಲಾ ಹೂಗಳು ಅರಳುತ್ತವೆ. ಆಗ ಆ ಹೂವಿನಲ್ಲೇ ಲಕ್ಷ್ಮಿ ಇರುವಳೆಂದು ತಿಳಿದು ಆ ಹೂವನ್ನು ಆಲಂಗಿಸಿಕೊಳ್ಳುತ್ತಾರೆ. ಅದರಿಂದ ಲಕ್ಷ್ಮಿಯು ನಾಚಿಕೆಯಿಂದ ಹೊರಬರುತ್ತಾರೆ. ಆದ್ದರಿಂದ ಆ ಊರಿಗೆ ತಿರುನಗರಿ ಎಂಬ ಹೆಸರು ಬಂದಿತು.

ಅದೇ ಸಮಯದಲ್ಲಿ ಲಕ್ಷ್ಮಿನಾರಾಯಣರ ಪಾದಗಳನ್ನು ಕರ್ತಮ ಪ್ರಜಾಪತಿಯು ಹಿಡಿದುಕೊಂಡು ಮೋಕ್ಷ ಪ್ರಾಪ್ತಿಗಾಗಿ ಪ್ರಾರ್ಥಿಸಿದನು. ನಾರಾಯಣನು ಅವನಿಗೆ ಪ್ರತಿಯುಗದಲ್ಲಿಯೂ ಜನ್ಮಿಸಿ ಕೊನೆಯದಾಗಿ ಕಲಿಯುಗದಲ್ಲಿ ಮೋಕ್ಷ ದೊರೆಯುವುದೆಂದು ತಿಳಿಸಿದರು. ತಿರುನಗರಿಯಲ್ಲೇ ತನಗೆ ಮೋಕ್ಷ ದೊರಕುವುದೆಂದು ಆತನಿಗೆ ಅಂದು ತಿಳಿಯಲಿಲ್ಲ.

ತಿರುನಗರಿ ಬಳಿಯಿರುವ ಕುರ್ರೈಯಲೂರ್ ಎಂಬಲ್ಲಿ ಚೋಳರಾಜನ ಬಳಿಯಿರುವ ಸೇನಾಧಿಪತಿಯ ಮಗನಾಗಿ ತಿರುಮಂಗೈ ಆಳ್ವಾರ್ ಜನಿಸಿದರು. ಇವರು ಸಕಲ ಸಮರ ವಿದ್ಯೆಗಳನ್ನೂ ಕಲಿತರು. ಆನಂತರ ಚೋಳ ರಾಜನ ಬಳಿ ಸೇನಾಧಿಪತಿಯಾಗಿ ಕಾರ್ಯ ನಿರ್ವಹಿಸಿ ಎಲ್ಲ ಕಡೆಯ ರಾಜ್ಯಗಳನ್ನು ಜಯಿಸಿ ಚೋಳರಾಜ್ಯವನ್ನು ವಿಸ್ತಾರ ಮಾಡುವಲ್ಲಿ ಸಹಕರಿಸಿದರು. ಇವರ ಸೇವೆಗೆ ಮೆಚ್ಚಿ ರಾಜನು ತಿರುಮಂಗೈ ಎನ್ನುವ ಊರ ರಾಜನಾಗಿ ಪಟ್ಟಾಭಿಷೇಕ ಮಾಡಿ ಉಡುಗೊರೆಯಾಗಿ ನೀಡಿ ಕುಮುದವಲ್ಲಿ ಎನ್ನುವ ಕನ್ಯೆಯನ್ನೂ ವಿವಾಹ ಮಾಡಿಕೊಟ್ಟರು. ಕುಮುದವಲ್ಲಿಯ ಜನ್ಮಸ್ಥಳವಾದ ಮಂಗೈಮಡಂ ಎನ್ನುವ ಊರಲ್ಲಿ ಪ್ರತಿದಿನ 1008 ವೈಷ್ಣವರಿಗೆ

ಅನ್ನದಾನ ಮಾಡುವಂತೆ ತಿರುಮಂಗೈ ಆಳ್ವಾರರಿಗೆ ಕುಮುದವಲ್ಲಿಯು ತಿಳಿಸಿದಾಗ ಅವರು ಒಪ್ಪಿ ಅದರಂತೆ ಅನ್ನದಾನ ಮಾಡುತ್ತಿದ್ದರು. ಅನ್ನದಾನ ಮಾಡುತ್ತಾ ತನ್ನ ಬಳಿ ಇದ್ದ ಹಣವೆಲ್ಲವೂ ಖಾಲಿಯಾಯಿತು. ಚೋಳ ರಾಜನಿಗೆ ಕಪ್ಪ ಕಟ್ಟಲೂ ಸಹ ತಿರುಮಂಗೈ ಬಳಿ ಹಣವಿರಲಿಲ್ಲ. ಆಗ ರಾಜನು ತಿರುಮಂಗೈನನ್ನು ಕರೆಸಿ ಕಾರಣ ಕೇಳಿದಾಗ ತಿರುಮಂಗೈ 'ನಾನು ಪ್ರತಿದಿನ 1008 ವೈಷ್ಣವರಿಗೆ ಅನ್ನದಾನ ಮಾಡುತ್ತಿದ್ದೇನಾದ್ದರಿಂದ ತಮಗೆ ಕಪ್ಪ ಕಟ್ಟಲು ಸಾಧ್ಯವಾಗಲಿಲ್ಲ. ನನ್ನನ್ನು ಕ್ಷಮಿಸಿ' ಎಂದು ಹೇಳಿದನು. ಅದಕ್ಕೆ ರಾಜನು 'ಸರಿ. ನೀನು ಈ ಕೆಲಸ ಮಾಡುವಾಗ ನನ್ನ ಬಳಿ ಒಂದು ಮಾತು ಕೇಳಬಹುದಿತ್ತಲ್ಲವೇ? ಅದು ನನ್ನ ಹಣ. ನಿನ್ನದಲ್ಲವಲ್ಲಾ?' ಎಂದು ಹೇಳಿ ಆತನನ್ನು ತಿರುನರೈಯೂರ್ ಎಂಬಲ್ಲಿ ಸೆರೆ ಮಾಡಿಟ್ಟರು.

ತಿರುನರೈಯೂರಿನಲ್ಲಿ ಮೂರು ದಿನಗಳಿಂದ ಉಪವಾಸವಿದ್ದ ತಿರುಮಂಗೈ ನಾಚ್ಚಿಯಾರ್ ಕೋಯಿಲ್‌ನಲ್ಲಿನ ದೇವರನ್ನು 'ನನ್ನಿಂದ ಪ್ರತಿದಿನ 1008 ವೈಷ್ಣವರಿಗೆ ಅನ್ನದಾನ ಮಾಡಿ ನನ್ನನ್ನೂ ವೈಷ್ಣವನನ್ನಾಗಿ ಬದಲಾಯಿಸಿದ್ದೀಯೆ. ಈಗ ನನಗೆ ಊಟವೂ ಇಲ್ಲದಂತೆ ಮಾಡಿದ್ದೀಯೆ. ಇದು ಸರಿಯೇ?' ಎಂದು ಕೇಳಿದರು.

ಮಹಾಲಕ್ಷ್ಮಿಯು ನಾರಾಯಣನ ಬಳಿ ತಿರುಮಂಗೈನ ಅವಸ್ಥೆಯನ್ನು ತಿಳಿಸಿದಾಗ ನಾರಾಯಣನು ಪ್ರಸಾದವನ್ನು ತಿರುಮಂಗೈ ಬಳಿ ಕಳಿಸಿದರು. ಪ್ರಸಾದ ತಿಂದು ಮಲಗಿದ ತಿರುಮಂಗೈ ಕನಸಿನಲ್ಲಿ ನಾರಾಯಣನು ಕಾಣಿಸಿ 'ನೀನು ಕಾಂಚೀಪುರಕ್ಕೆ ವರದರಾಜಸ್ವಾಮಿ ದೇಗುಲಕ್ಕೆ ಬಾ. ನಿನ್ನ ಕಷ್ಟಗಳೆಲ್ಲವೂ ತೀರುತ್ತದೆ' ಎಂದು ತಿಳಿಸಿದರು. ಮರುದಿನ ಬೆಳಗ್ಗೆ ತಿರುಮಂಗೈ ಕಾಂಚೀಪುರಕ್ಕೆ ಹೊರಟು ರಾತ್ರಿ ತಲುಪಿದನು. ಆಗ ಅಲ್ಲಿನ ಅಧಿಕಾರಿಗಳು ಈಗ ರಾತ್ರಿಯಾಯಿತು ಬೆಳಗ್ಗೆ ನಿನಗೆ ಬೇಕಾದ ದ್ರವ್ಯವನ್ನು ನೀಡುವೆವು ಎಂದರು. ಆ ರಾತ್ರಿ ಮಲಗಿರುವಾಗ ಮತ್ತೆ ನಾರಾಯಣನು ಕನಸಿನಲ್ಲಿ ಬಂದು ವೇಗವತಿ ನದಿ ತೀರಕ್ಕೆ ಬಾ ಎಂದು ದ್ರವ್ಯವಿರುವ ಸ್ಥಳವನ್ನು ತೋರಿಸಿದರು. ಮರುದಿನ ಬೆಳಗ್ಗೆ ತಿರುಮಂಗೈ ವೇಗವತಿ ನದಿ ತೀರಕ್ಕೆ ಬಂದು ಸ್ನಾನ ಮಾಡಲು ಸಾಕ್ಷಾಂಗ ನಮಸ್ಕಾರ ಮಾಡಿದಾಗ ನದಿ ದಡದಲ್ಲಿನ ಮರಳಿನಲ್ಲಿ ಏನೋ ಸಿಕ್ಕಿದಂತಾಯಿತು. ನೋಡಿದಾಗ ಮಣ್ಣಿನ ಮಡಿಕೆಯೊಂದು ದೊರೆಯಿತು. ಅದರಲ್ಲಿ ವಜ್ರವೈಢೂರ್ಯಗಳು ಹೇರಳವಾಗಿದ್ದವು. ಅದನ್ನು ತೆಗೆದುಕೊಂಡ ತಿರುಮಂಗೈ ಚೋಳರಾಜನ ಕಪ್ಪವನ್ನು ಕಟ್ಟಿ ಸೆರೆಯಿಂದ ಬಿಡುಗಡೆ ಹೊಂದಿದನು.

ತನ್ನೂರಿಗೆ ಮರಳಿ ಬಂದ ತಿರುಮಂಗೈ ಮತ್ತೆ ವೈಷ್ಣವರಿಗೆ ಅನ್ನದಾನ ಮಾಡಲು ಮತ್ತು ಒಂದು ದೇಗುಲವನ್ನು ಕಟ್ಟಲು ಮುಂದಾದನು. ಆದರೆ ತನ್ನ ಬಳಿ ಹಣವಿರಲಿಲ್ಲ. ಯಾರ ಬಳಿ ಹಣವನ್ನು ಕೇಳಿದರೂ ಹಣ ದೊರೆಯಲಿಲ್ಲ. ಕಡೆಗೆ ಕಳ್ಳತನ ಮಾಡಿಯಾದರೂ ದೇಗುಲ ಕಟ್ಟಬೇಕೆಂಬ ನಿರ್ಧಾರಕ್ಕೆ ಬರುತ್ತಾನೆ. ಒಮ್ಮೆ ಊರಿನಲ್ಲಿ ಹೋಗುತ್ತಿದ್ದಾಗ ನಾಲ್ಕು ಜನ ಕಳ್ಳರನ್ನು ಸಂಧಿಸುತ್ತಾನೆ. ಆ ನಾಲ್ವರೂ ಕಳ್ಳರೂ ಕಳ್ಳತನದಲ್ಲಿ ನಿಪುಣರು. ಅವರೊಂದಿಗೆ ತಾನೂ ಸೇರಿಕೊಂಡು ಕಳ್ಳತನ ಮಾಡಿ ದೇವರ ಸೇವೆ ಮಾಡೋಣ ಎಂದು ನಿರ್ಧರಿಸಿ ಕಳ್ಳರೊಂದಿಗೆ ಸೇರಿ ತಾನೂ ಕಳ್ಳತನ ಮಾಡುತ್ತಾನೆ. ಒಂದು ದಿನ ಒಂದು ಮದುವೆ ದಿಬ್ಬಣವೊಂದು ಬರುತ್ತಿರುತ್ತದೆ. ಆ ಮದುವೆ ದಿಬ್ಬಣವನ್ನು ನೋಡಿದ ತಿರುಮಂಗೈ ಮತ್ತವರ ತಂಡವು ದಿಬ್ಬಣವನ್ನು ಅಡ್ಡ ಹಾಕಿ ಜನರ ಬಳಿ ಆಭರಣಗಳನ್ನೆಲ್ಲಾ ಕಳಚಿ ಇಡಲು ಹೇಳುತ್ತಾರೆ. ಮದುಮಗಳು ಮಾಂಗಲ್ಯವೊಂದನ್ನು ಬಿಟ್ಟು ತನ್ನೆಲ್ಲಾ ಆಭರಣಗಳನ್ನು ಕಳಚಿಡುತ್ತಾಳೆ. ತಿರುಮಂಗೈ ಅದನ್ನು ನೋಡಿ ಮಾಂಗಲ್ಯವೇ ಸರಿ ನೀನೇ ಇಟ್ಟುಕೋ ಎಂದು ಹೇಳಿ ಮದುಮಗನ ಬಳಿ ಬಂದು ಎಲ್ಲಾ ಆಭರಣಗಳನ್ನು ತೆಗೆದುಕೊಡಲು ಹೇಳುತ್ತಾನೆ. ಮದುಮಗನು ಎಲ್ಲಾ ಆಭರಣಗಳನ್ನು ತೆಗೆದಿಡುತ್ತಾನೆ. ಆದರೆ ಕಾಲಿನಲ್ಲಿರುವ ಕಾಲುಂಗರವನ್ನು ಉಳಿಸಿಕೊಂಡಿರುತ್ತಾನೆ. ಅದನ್ನು ಕಂಡ ತಿರುಮಂಗೈ ಅದನ್ನೂ ಕೊಡುವಂತೆ ಕೇಳಿದಾಗ ಅದನ್ನು ನೀನೇ ತೆಗೆದುಕೋ ಎಂದು ಮದುಮಗನು ಉತ್ತರಿಸುತ್ತಾನೆ. ತಿರುಮಂಗೈ ಮದುಮಗನ ಕಾಲಿನ ಉಂಗುರವನ್ನು ತೆಗೆಯಲು ಎಷ್ಟೇ ಪ್ರಯತ್ನಿಸಿದರೂ ಬರುವುದಿಲ್ಲ. ಕಾಲಿಗೆ ಬಿದ್ದು ಬಾಯಿಯಿಂದ ಕಚ್ಚಿ ತೆಗೆದರೂ ಬರಲಿಲ್ಲ. ಕೊನೆಗೆ ಆಯ್ತು ನೀನೂ ಅದನ್ನು ಇಟ್ಟುಕೋ ಎಂದು ತಿರುಮಂಗೈ ಹೇಳಿ ಆಭರಣಗಳ ಮೂಟೆಯನ್ನು ಎತ್ತಿಕೊಳ್ಳಲು ಹೋಗುತ್ತಾನೆ. ಆದರೆ ಅದು ಮೇಲಕ್ಕೆ ಬರುವುದಿಲ್ಲ. ಹಲವಾರು ಬಾರಿ ಪ್ರಯತ್ನಿಸಿದರೂ ಆ ಮೂಟೆ ಮೇಲಕ್ಕೆ ಬರುವುದಿಲ್ಲ. ಆಗ ಆ ಮದುಮಕ್ಕಳನ್ನು ನೋಡಿ ಏನು ಜಾದು ಮಾಡುತ್ತಿರುವಿರಾ ಎಂದು ತನ್ನ ಬಳಿಯಿದ್ದ ಕತ್ತಿಯನ್ನು ತೋರಿಸಿದರು. ಆಗ ಮದುಮಕ್ಕಳು ಲಕ್ಷ್ಮೀನಾರಾಯಣನ ರೂಪದಲ್ಲಿ ದರ್ಶನ ಕೊಡುತ್ತಾರೆ. ನಾರಾಯಣನು ತಿರುಮಂಗೈಗೆ 'ನೀನು ಹಿಡಿದಿರುವ ಕೆಲಸವನ್ನು ಸಾಧಿಸಲು ಕಳ್ಳತನಕ್ಕೂ ಇಳಿದಿದ್ದೀಯಲ್ಲ. ಕಳ್ಳತನ ಮಾಡಿಯಾದರೂ ದೇಗುಲ ಕಟ್ಟಬೇಕೆಂಬ

ನಿನ್ನ ಇಚ್ಛೆ ಅಪರೂಪವಾದದ್ದು. ಈ ಆಭರಣದ ಮೂಟೆಯನ್ನು ತೆಗೆದುಕೊಂಡು ನಿನ್ನ ಇಷ್ಟವನ್ನು ನೆರವೇರಿಸಿಕೋ' ಎಂದು ಆಶೀರ್ವದಿಸಿ ಅಂತರ್ಧಾನನಾದರು.

ತಿರುಮಂಗೈ ಈ ಆಭರಣಗಳಿಂದ ತನ್ನ ಇಚ್ಛೆಯಂತೆ ದೇಗುಲ ನಿರ್ಮಿಸಿ ಶಿಷ್ಯರೊಂದಿಗೆ ತೀರ್ಥಯಾತ್ರೆ ಕೈಗೊಂಡರು.

**ಇವರು ಮಂಗಳ ಶಾಸನ ಮಾಡಿದ ಸ್ಥಳಗಳು :**

**ತಿರುಪ್ರೀತಿ, ನೈಮಿಷಾರಣ್ಯ, ಸಾಲಗ್ರಾಮಂ, ಬದ್ರಿಕಾಶ್ರಮ, ತಿರುಅಯೋಧಿ, ತಿರುದ್ವಾರಕೈ, ತಿರುಮಧುರಾ, ಬೃಂದಾವನಂ, ಗೋಕುಲಂ, ಗೋವರ್ಧನ ದಿವ್ಯದೇಶಗಳನ್ನು ದರ್ಶಿಸಿ, ಪಿನಾಕಿನಿ, ಕೃಷ್ಣ, ಗೋದಾವರಿ ನದಿಗಳಲ್ಲಿ ಸ್ನಾನ ಮಾಡಿ ಭದ್ರಾಚಲಂ, ಸಿಂಹಾಚಲಂ, ಶ್ರೀಕೂರ್ಮಂ, ತಿರುವೇಂಕಟಂ, ಕಾಂಚೀಪುರಂ ಮತ್ತಿತರ ಸ್ಥಳಗಳಲ್ಲಿನ ದೇಗುಲಗಳನ್ನು ದರ್ಶಿಸಿ ಮಂಗಳಶಾಸನ ಮಾಡಿ ತಿರುವರಂಗಂಗೆ ವಾಪಸ್ಸಾಗಿ ರಂಗನಾಥನ ಬಳಿ ಮೋಕ್ಷಕ್ಕಾಗಿ ಬೇಡಿಕೆ ಇತ್ತರು. ಭಗವಂತನು ತಿರುಕ್ಕುರಂಗುಡಿಗೆ ತೆರಳಲು ಹೇಳಿದರು. ತಿರುಮಂಗೈ ತಿರುಕ್ಕುರಂಗುಡಿಗೆ ತೆರಳಿ ಮೋಕ್ಷಗೈದರು.**

ಈ ಹನ್ನೆರಡು ಆಳ್ವಾರ್‌ಗಳು ದೈವ ಭಕ್ತಿಯಲ್ಲಿ ಉತ್ತುಂಗಕ್ಕೇರಿ ದೈವ ಸಾಕ್ಷಾತ್ಕಾರ ಮಾಡಿಕೊಂಡವರು. ಇವರ ನಾಮಸ್ಮರಣೆಯೇ ನಮಗೆ ಶ್ರೀರಕ್ಷೆ. ಇವರು ಮಾಡಿರುವ 108 ದಿವ್ಯದೇಶಗಳನ್ನು ದರ್ಶಿಸಿ ನಾವೂ ಮುಕ್ತಿ ಹೊಂದೋಣ.

ಆಳ್ವಾರರು ಮಾಡಿರುವ 108 ದಿವ್ಯದೇಶಗಳ ಸ್ಥೂಲ ಪರಿಚಯವನ್ನೂ ಮಾಡಿಕೊಳ್ಳೋಣ.

॥ ಓಂ ನಮೋ ನಾರಾಯಣಾಯ ॥

---

**12 ಆಳ್ವಾರ್‌ಗಳು ಮಂಗಳಶಾಸನ ಮಾಡಿದ ದಿವ್ಯ ದೇಶಗಳು**

| | |
|---|---|
| ಚೋಳನಾಡು ದಿವ್ಯದೇಶಗಳು | 40 |
| ನಡುನಾಡು ದಿವ್ಯದೇಶಗಳು | 2 |
| ತೊಂಡೈ ನಾಡು ದಿವ್ಯದೇಶಗಳು | 22 |
| ಪಾಂಡ್ಯ ನಾಡು ದಿವ್ಯದೇಶಗಳು | 18 |
| ಮಲಯನಾಡು ದಿವ್ಯದೇಶಗಳು | 13 |
| ವಡನಾಡು ದಿವ್ಯದೇಶಗಳು | 11 |
| ದೇವಲೋಕ | 2 |
| ಒಟ್ಟು | 108 |



# ಚೋಳನಾಡು ದಿವ್ಯ ದೇಶಗಳು

## 1. ತಿರುವರಂಗಂ (ಶ್ರೀರಂಗಂ)

**॥ ಓಂ ಶ್ರೀರಂಗನಾಯಕಿ ಸಮೇತ ಶ್ರೀರಂಗನಾಥ ಸ್ವಾಮಿನೇ ನಮಃ ॥**

ಶ್ರೀ ವೈಷ್ಣವ ದಿವ್ಯಕ್ಷೇತ್ರಗಳಲ್ಲಿ ಅತ್ಯಂತ ಹೆಚ್ಚಿನ ಹಿರಿಮೆಯನ್ನು ಪಡೆದಿರುವ ಕ್ಷೇತ್ರ. (ಶ್ರೀರಂಗ ಕ್ಷೇತ್ರ. ಇದು ತಿರುಚ್ಚಿರಾಪಳ್ಳಿ ಊರಿನಿಂದ 8 ಕಿ.ಮೀ. ದೂರದಲ್ಲಿದೆ. ಶ್ರೀರಂಗಂದಲ್ಲಿ ರೈಲ್ವೆ ನಿಲ್ದಾಣವುಂಟು. ಬೆಂಗಳೂರಿನಿಂದ ತಿರುಚ್ಚಿಗೆ ಹೋಗುವ ಮಾರ್ಗದಲ್ಲಿಯೇ ಶ್ರೀರಂಗಂ ಕ್ಷೇತ್ರ ಇದೆ. ಶ್ರೀರಂಗವು ದೊಡ್ಡ ಊರಾಗಿದ್ದು, ತಂಗಲು ಹೋಟೆಲುಗಳು, ಛತ್ರಗಳು, ರಾಮಾನುಜ ಕೂಟ ಮುಂತಾದವು ಇದ್ದು, ಎಲ್ಲಾ ರೀತಿಯ ಅನುಕೂಲಗಳು ಇವೆ.

ಈ ಕ್ಷೇತ್ರ 'ಪೆರಿಯ ಕೋಯಿಲ್' ಎಂದು ಪ್ರಸಿದ್ದವಾಗಿದ್ದು, ಭೂಲೋಕ ವೈಕುಂಠ, ತಿರುವರಂಗ ತಿರುಪತಿ, ಭೋಗಮಂಟಪಂ ಎಂಬುದಾಗಿಯೂ ಸಹ ಕರೆಯಲ್ಪಟ್ಟಿದೆ.

ಇಲ್ಲಿನ ಮುಖ್ಯ ದೈವ ಶ್ರೀರಂಗನಾಥಸ್ವಾಮಿ ಇವರಿಗೆ ಪೆರಿಯ ಪೆರುಮಾಳ್, ನಂ ಪೆರುಮಾಳ್, ಅಳಗಿಯ ಮಣವಾಳನ್ ಎಂದೂ ಸಹ ಹೆಸರುಗಳುಂಟು. ಶ್ರೀರಂಗ ನಾಚ್ಚಿಯಾರ್ ಎಂದು ಅಮ್ಮನವರ ತಿರುನಾಮ, ವಿಮಾನವು ಪ್ರಣಾವಾಕಾರದಲ್ಲಿದೆ. ಕಾವೇರಿ ನದಿ ಹತ್ತಿರದಲ್ಲಿಯೇ ಎಂದು ಅಮ್ಮನವರ ತಿರುನಾಮ. ಅರ್ಚಾ ಮೂರ್ತಿಯು ದಕ್ಷಿಣ ದಿಕ್ಕಿಗೆ ಎದುರಾಗಿದ್ದು ಆದಿಶೇಷನ ಮೇಲೆ ಶಯನ ಭಂಗಿಯಲ್ಲಿ ವಿರಾಜಮಾನವಾಗಿದೆ. ದೇವಸ್ಥಾನವು ಏಳು ಪ್ರಾಕಾರಗಳು ಒಳಗೊಂಡಿದ್ದು(15) ಹದಿನೈದು ಗೋಪುರಗಳಿವೆ. ಇತ್ತೀಚೆಗೆ ಪ್ರಧಾನ ಗೋಪುರವಾದ ರಾಜಗೋಪುರವನ್ನು ಬಹಳ ಆಕರ್ಷಕವಾಗಿ ಕಟ್ಟಲಾಗಿದೆ.

ಈ ಕ್ಷೇತ್ರವು ಸ್ವಯಂ ವ್ಯಕ್ತ ಕ್ಷೇತ್ರವಾಗಿದ್ದು, ಶ್ರೀವೈಷ್ಣವ ದಿವ್ಯದೇಶಗಳಲ್ಲಿ ಮೊದಲನೆಯದಾಗಿದ್ದು ಅತ್ಯಂತ ಹೆಚ್ಚಿನ ಮಹತ್ವವನ್ನ ಪಡೆದಿದೆ. ಶ್ರೀರಂಗನಾಥನ ದಿವ್ಯಮಂಗಳ ವಿಗ್ರಹವು ಇಕ್ಷ್ವಾಕು ವಂಶದ ಆರಾಧ್ಯ ದೈವವಾಗಿದ್ದು ಶ್ರೀರಾಮನಿಂದಲೂ ಸಹ ಆರಾಧಿಸಲ್ಪಟ್ಟಿದ್ದು, ಅನಂತರ ಶ್ರೀರಾಮನಿಂದ ವಿಭೀಷಣನಿಗೆ ಕೊಡಲ್ಪಟ್ಟು ಕಾರಣಾಂತರ ಗಳಿಂದ ವಿಭೀಷಣನು ಲಂಕೆಗೆ ತೆಗೆದುಕೊಂಡು ಹೋಗಲು ಸಾಧ್ಯವಾಗದೆ, ಈಗಿರುವ ಶ್ರೀರಂಗ ಕ್ಷೇತ್ರದಲ್ಲಿಯೇ ಆರ್ಚಾಮೂರ್ತಿಯು ಪ್ರತಿಷ್ಠಿತವಾಗಿದ್ದು, ಪ್ರತಿ ಹನ್ನೆರಡು ವರ್ಷಗಳಿಗೊಮ್ಮೆ ವಿಭೀಷಣನು ಬಂದು ಪೂಜಿಸುವುದಾಗಿ ಪ್ರತೀತಿ ಉಂಟು. ವಿಭೀಷಣನು ವಾಸವಾಗಿರುವ ಲಂಕೆಯು ಶ್ರೀರಂಗಕ್ಕೆ ದಕ್ಷಿಣ ದಿಕ್ಕಿನಲ್ಲಿ ಇರುವುದರಿಂದ, ಅವನನ್ನು ಸದಾಕಾಲ ಅನುಗ್ರಹಿಸುವುದಕ್ಕಾಗಿಯೇ ದಕ್ಷಿಣಾಭಿಮುಖವಾಗಿ ಶ್ರೀರಂಗನಾಥನು ಶಯನಿಸಿರುವುದಾಗಿಯೂ ಹೇಳುವುದುಂಟು.

ಈ ದಿವ್ಯಕ್ಷೇತ್ರದಲ್ಲಿ ವರ್ಷಪೂರ್ತಿ ವಿವಿಧ ರೀತಿಯ ಉತ್ಸವಗಳು ನಡೆಯುವುದಲ್ಲದೆ ವೈಕುಂಠ ಏಕಾದಶಿಯ ಉತ್ಸವವು ಬಹಳ ವಿಜೃಂಭಣೆಯಿಂದ ಜರಗುತ್ತವೆ. ಪಾಂಚರಾತ್ರ ಆಗಮದ ಪ್ರಕಾರ ಪೂಜಾವಿಧಿಗಳು ನಡೆಯುತ್ತವೆ. ದೇವಸ್ಥಾನದ ಪ್ರಾಕಾರಗಳಲ್ಲಿ ಎಲ್ಲ ಆಳ್ವಾರ್‌ಗಳಿಗೂ, ಸ್ವಾಮಿ ರಾಮಾನುಜರು ಹಾಗೂ ಸ್ವಾಮಿ ವೇದಾಂತ ದೇಶಿಕರು ಮತ್ತು ಸುದರ್ಶನಾಳ್ವಾರ್ ಅವರುಗಳಿಗೂ ಪ್ರತ್ಯೇಕ ಸನ್ನಿಧಿಗಳುಂಟು.

ಈ ಕ್ಷೇತ್ರಕ್ಕೆ ಶ್ರೀವೈಷ್ಣವ ಸಿದ್ಧಾಂತದ ಎಲ್ಲಾ ಆಚಾರ್ಯರುಗಳ ಸಂಬಂಧವುಂಟು.

ಶ್ರೀ ಮನ್ನಾಥಮುನಿಗಳು, ನಾಲಾಯಿರ ದಿವ್ಯಪ್ರಬಂಧವನ್ನು ಕ್ರಮಬದ್ಧವಾಗಿ ಹಾಡುವ ಸಂಪ್ರದಾಯವನ್ನು ಏರ್ಪಡಿಸಿದರು. ಶ್ರೀ ಭಾಷ್ಯಕಾರರು ಉತ್ಸವಗಳನ್ನೇರ್ಪಡಿಸಿ, ಆಯಾ ಕಾಲದಲ್ಲಿ ಹಾಡಬೇಕಾದ ಪ್ರಬಂಧಗಳನ್ನು ನಿಗದಿಪಡಿಸಿದರು. ತಿರುಮಂಗೈ ಆಳ್ವಾರರೇ ದೇವಸ್ಥಾನವನ್ನು ದುರಸ್ತಿ ಪಡಿಸಿದುದಾಗಿ ದಾಖಲೆ ಇದೆ. ತೊಂಡರಪ್ಪಡಿ ಆಳ್ವಾರರು ತುಲಸಿ ಮಾಲಾ ಕೈಂಕರ್ಯವನ್ನು ಶ್ರೀರಂಗನಾಥನಿಗೆ ನಡೆಸುತ್ತಿದ್ದರು.

ಸ್ವಾಮಿ ದೇಶಿಕರು ಇಲ್ಲಿ ಬಹುಕಾಲವಿದ್ದು ಸ್ವತಃ ಶ್ರೀರಂಗನಾಥನಿಂದ ಹಾಗೂ ಶ್ರೀರಂಗನಾಯಕಿ ತಾಯಿಯಿಂದ ಬಿರುದುಗಳನ್ನು ಪಡೆದರು. ಅನೇಕ

ಅಪಸಿದ್ಧಾಂತಿಗಳನ್ನು ಈ ಕ್ಷೇತ್ರದಲ್ಲಿ ಜಯಿಸಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಭದ್ರ ಬುನಾದಿಯ ಮೇಲೆ ಸ್ಥಾಪಿಸಿದರು. ಮುಸ್ಲಿಮರ ಆಕ್ರಮಣ ಕಾಲದಲ್ಲಿ ಶ್ರೀರಂಗನಾಥನ ಉತ್ಸವ ವಿಗ್ರಹವನ್ನು ಆಚಾರ್ಯ ದೇಶಿಕರು ರಕ್ಷಿಸಿ, ಮತ್ತೆ ಪ್ರತಿಷ್ಠಾಪನೆ ಮಾಡಿದರು.

ತಮಿಳ ಭಾಷೆಯಲ್ಲಿ ಪ್ರಸಿದ್ಧವಾಗಿರುವ ಕಂಬ ರಾಮಾಯಣದ ಪ್ರಥಮ ವಾಚನ ಈ ದೇವಸ್ಥಾನದಲ್ಲಿ ನಡೆಯಿತು. ಈಗಲೂ ಸಹ ಆ ಸ್ಥಳವನ್ನು ತೋರಿಸುವ ನಾಮಫಲಕವಿದೆ. ಮೆಟ್ಟು ಅಳಸಿಂಗರ್ ಎಂದು ಕರೆಯುವ ನರಸಿಂಹನ ಸನ್ನಿಧಿ ಎದುರು ಕಂಬ ರಾಮಾಯಣದ ವಾಚನ ನಡೆಯಿತು.

ಶ್ರೀ ವೈಷ್ಣವ ಸಿದ್ಧಾಂತದ ದಿಗ್ಗಜರಾದ ಪರಾಶರ ಭಟ್ಟರು, ವಡಕ್ಕು ತಿರುವೀಧಿ ಪಿಳ್ಳೈ, ಪಿಳ್ಳೈ ಲೋಕಾಚಾರ್ಯ, ಪೆರಿಯ ನಂಬಿ ಮುಂತಾದವರು ಶ್ರೀರಂಗದಲ್ಲಿ ಜನಿಸಿದರು. ತೊಂಡರಡಿಪ್ಪಡಿ ಆಳ್ವಾರ್ ಮತ್ತು ತಿರುಪ್ಪಾಣಾಳ್ವಾರ್ ಅವರುಗಳು ಇಲ್ಲಿ ಮೋಕ್ಷವನ್ನು ಹೊಂದಿದರೆಂದು ಉಲ್ಲೇಖ ಇದೆ. 'ಶೂಡಿಕೊಡುತ್ತ ನಾಚ್ಚಿಯಾರ್' ಆದ ಅಂಡಾಳ್ ದೇವಿಯು ಶ್ರೀರಂಗನಾಥನನ್ನೇ ವರಿಸಿದಳು. ಇಲ್ಲಿನ ಉತ್ಸವಗಳ ವಿವರಗಳಿಗೆ ಸ್ಥಳ ಪುರಾಣಗಳನ್ನು ಅವಲೋಕಿಸಬಹುದು.

ಶ್ರೀ ಮಣವಾಳ ಮಾಮುನಿಗಳು ಶ್ರೀರಂಗದಲ್ಲಿ ನಡೆಸುತ್ತಿದ್ದ ಕಾಲಕ್ಷೇತ್ರಗಳನ್ನು ಸ್ವತಃ ಶ್ರೀ ರಂಗನಾಥನೇ ರಸಿಕತೆಯಿಂದ ಕೇಳುತ್ತಿದ್ದನೆಂದು ಚರಿತ್ರೆ ಉಂಟು.

ಶ್ರೀ ಮಧುರಕವಿ ಆಳ್ವಾರ್ ಅವರೊಬ್ಬರನ್ನು ಬಿಟ್ಟು ಮಿಕ್ಕ ಎಲ್ಲ ಆಳ್ವಾರುಗಳು ಶ್ರೀರಂಗ ಕ್ಷೇತ್ರವನ್ನು ತಮ್ಮ ಪಾಶುರಗಳಲ್ಲಿ ಸುತ್ತಿಸಿದ್ದಾರೆ.

ಮೂಲವರ್ : ಶ್ರೀ ರಂಗನಾಥನ್

ಉತ್ಸವರ್ : ನಂಪೆರುಮಾಳ್ (ನಿಂತಿರುವ ಪೆರುಮಾಳ್)

ತಾಯಾರ್ : ಶ್ರೀ ರಂಗನಾಯಕಿ

ತೀರ್ಥಂ : ಚಂದ್ರ ಪುಷ್ಕರಣಿ, ವಿಲ್ವ ತೀರ್ಥಂ, ನಾವಲ್ ತೀರ್ಥಂ, ಅರಸು ತೀರ್ಥಂ, ಪುನ್ನೈ ತೀರ್ಥಂ, ಮಧುರೈ ತೀರ್ಥಂ, ಪೊರಸು ತೀರ್ಥಂ, ಕಡಂಬ ತೀರ್ಥಂ, ಮಾ ತೀರ್ಥಂ (ನವ ತೀರ್ಥಗಳು)

ಸ್ಥಳ ವೃಕ್ಷಂ : ಪುನ್ನೈ

ವಿಮಾನಂ : ಪ್ರಣವಾಕೃತಿ

ಪ್ರತ್ಯಕ್ಷಗೊಂಡಿರುವುದು : ಧರ್ಮವರ್ಮ, ರವಿದರ್ಮನ್, ಚಂದ್ರನ್, ವಿಭೂಷಣ

ಮಂಗಳಶಾಸನ ಮಾಡಿರುವವರು :

1. ಪೊಯ್‌ಗೈ ಆಳ್ವಾರ್, 2.ಭೂತತ್ತಾಳ್ವಾರ್, 3.ಪೆಯಾಳ್ವಾರ್, 4. ತಿರುಮಳಿಶೈ ಆಳ್ವಾರ್, 5.ನಮ್ಮಾಳ್ವಾರ್, 6.ಕುಲಶೇಖರಾಳ್ವಾರ್, 7.ಪೆರಿಯಾಳ್ವಾರ್, 8.ಆಂಡಾಳ್, 9.ತೊಂಡರಡಿಪೊಡಿ ಆಳ್ವಾರ್, 10. ತಿರುಪ್ಪಾಣಾಳ್ವಾರ್, 11.ತಿರುಮಂಗೈಆಳ್ವಾರ್

ದೇವಸ್ಥಾನವು ಸಪ್ತ ಪ್ರಕಾರಗಳನ್ನೊಳಗೊಂಡಿದ್ದು, ಬಹಳ ದೊಡ್ಡದಾಗಿದೆ. ಸಾವಿರ ಕಂಬಗಳ ಮಂಟಪವಿದ್ದು, ಈಗ ಅದನ್ನು ಮ್ಯೂಸಿಯಂ ಮಾಡಿದ್ದಾರೆ.

## 2. ತಿರುಕ್ಕೋಳಿ (ತಿರುವರೈಯೂರ್)

॥ ಓಂ ವಾಸಲಕ್ಷ್ಮೀ ಸಮೇತ ಶ್ರೀ ಅಳಗಿಯಮನವಾಳ ಸ್ವಾಮಿನೇ ನಮಃ ॥

ಈ ಕ್ಷೇತ್ರಕ್ಕೆ ಕೋಳಿ, ನಿಚುಲಪುರಿ ಎಂಬುದಾಗಿಯೂ ಹೆಸರುಂಟು. ತಿರುಚ್ಚಿ ಕೋಟೆಯ ರೈಲ್ವೆಸ್ಟೇಷನ್ ಇಂದ ಸುಮಾರು 1.ಕಿ.ಮಿ. ದೂರವಿದೆ. ತಿರುಚ್ಚಿಯಿಂದ ಬಸ್ಸುಗಳು ಓಡಾಡುತ್ತವೆ. ಈ ಕ್ಷೇತ್ರವು ತಿರುಪ್ಪಾಣಾಳ್ವಾರ್ ಅವರ ಅವತಾರ ಸ್ಥಳ. ಇಲ್ಲಿಯೇ ವರೆಯೂರ್ ವಲ್ಲಿ ಎಂಬ ನಾಯಕಿಯನ್ನು ಅಳಹಿಯ ಮಣವಾಳನಾದ ರಂಗನಾಥನು ವಿವಾಹವಾದದ್ದೆಂದು ಪ್ರತೀತಿ ಇದೆ.

ಮೂಲವರ್ : ಅಳಗಿಯ ಮಣವಾಳ ಪೆರುಮಾಳ್ (ಮದುವೆ ಗಂಡು)

ತಾಯಾರ್ : ಊರಯೂರ್‌ವಲ್ಲಿ, ಕಮಲವಲ್ಲಿ ನಾಚ್ಚಿಯಾರ್, ವಾಸಲಕ್ಷ್ಮಿ

ತೀರ್ಥಂ : ಕಲ್ಯಾಣ ತೀರ್ಥಂ, ಸೂರ್ಯ ಪುಷ್ಕರಣಿ

ವಿಮಾನಂ : ಕಲ್ಯಾಣ

ಪ್ರತ್ಯಕ್ಷಗೊಂಡಿರುವುದು : ರವಿಧರ್ಮ ಮತ್ತು 33 ಕೋಟಿ ದೇವರುಗಳು.

ಮಂಗಳಶಾಸನ ಮಾಡಿರುವವರು :

1. ತಿರುಮಂಗೈ ಆಳ್ವಾರ್ 2. ಕುಲಶೇಖರ ಆಳ್ವಾರ್

# 3. ತಿರುಕರಂಬನೂರ್

**॥ ಓಂ ಶ್ರೀಪೂರ್ವಾದೇವಿ ಸಮೇತ ಶ್ರೀಪುರುಷೋತ್ತಮ ಸ್ವಾಮಿನೇ ನಮಃ ॥**

ಇದು ಶ್ರೀರಂಗದಿಂದ 1 ಕಿ.ಮೀ. ದೂರದಲ್ಲಿದೆ. ಬೆಂಗಳೂರಿನಿಂದ ತಿರುಚ್ಚಿಗೆ ಹೋಗುವ ಬಸ್‌ಗಳು ಉತ್ತಮರ್ ಕೋಯಿಲ್ ಮುಖಾಂತರ ಹಾದು ಹೋಗುತ್ತವೆ.

ಈ ದೇವಸ್ಥಾನದಲ್ಲಿ ತ್ರಿಮೂರ್ತಿಗಳಾದ ಬ್ರಹ್ಮ-ಸರಸ್ವತಿ, ವಿಷ್ಣು-ಲಕ್ಷ್ಮಿ, ಮಹೇಶ್ವರ-ಪಾರ್ವತಿಯರನ್ನು ಪೂಜೆ ಮಾಡಲಾಗುತ್ತಿದೆ. ಇತರ ಅನೇಕ ಹಿಂದೂ ಸಂಪ್ರದಾಯದ ದೇವರುಗಳ ಅರ್ಚಾಮೂರ್ತಿಗಳೂ ಸಹ ಪ್ರತಿಷ್ಠಾಪಿತಗೊಂಡಿವೆ. ಅನೇಕ ಆಳ್ವಾರರುಗಳ ವಿಗ್ರಹಗಳೂ ಇವೆ. ದೇವಸ್ಥಾನದಲ್ಲಿ ಎರಡು ಪ್ರಕಾರಗಳಿದ್ದು ಶಿವನ ಸನ್ನಿಧಿಯು ಪಶ್ಚಿಮಕ್ಕೂ, ಪುರುಷೋತ್ತಮನ ಸನ್ನಿಧಿಯು ಪೂರ್ವಕ್ಕೂ ಅಭಿಮುಖವಾಗಿವೆ. ಈ ದೇವಸ್ಥಾನವು ಬಹಳ ವಿಶಾಲವಾಗಿದ್ದು ಮದುವೆ ಮುಂತಾದ ಶುಭ ಸಮಾರಂಭಗಳನ್ನು ನಡೆಸಲು ಅನುಕೂಲವಾಗಿದೆ. ಶಿವನಿಗೆ ಕಪಾಲಮೋಕ್ಷವಾದ ಸ್ಥಳ ಇದೆಂದು ಹೇಳುತ್ತಾರೆ. ಇದಕ್ಕೆ ಭಿಕ್ಷಾಂಡಾರ್ ಸನ್ನಿಧಿ ಎಂಬ ಹೆಸರೂ ಇದೆ.

**ಮೂಲವರ್ :** ಪುರುಷೋತ್ತಮನ್ (ಶ್ರೀ ರಂಗನಾಥ)

**ತಾಯಾರ್ :** ಪೂರ್ವಾದೇವಿ, ಪೂರ್ಣವಲ್ಲಿ

**ತೀರ್ಥಂ :** ಕದಂಬ ತೀರ್ಥಂ

**ಸ್ಥಳ ವೃಕ್ಷಂ :** ಕದಳೀ (ಬಾಳೇ ಮರ)

**ವಿಮಾನಂ :** ಉದ್ಯೋಗ ವಿಮಾನಂ

**ಪ್ರತ್ಯಕ್ಷಗೊಂಡಿರುವುದು : ಕದಂಬ ಮುನಿ, ಉಪರಿಸರವಸು, ಸನತ್ಕುಮರ, ತಿರುಮಂಗೈ ಆಳ್ವಾರ್**

**ಮಂಗಳಶಾಸನ ಮಾಡಿರುವವರು : 1. ತಿರುಮಂಗೈಆಳ್ವಾರ್**

# 4. ತಿರುವೆಲ್ಲರೈ

॥ ಓಂ ಶ್ರೀಬಂಗಯ್ಯಚೆಲ್ವಿ ಸಮೇತ ಶ್ರೀಪುಂಡರೀಕಾಕ್ಷ ಸ್ವಾಮಿನೇ ನಮಃ ॥

ಈ ಸನ್ನಿಧಿಯು ತಿರುಚ್ಚಿ ಮತ್ತು ತುರೈಯೂರ್ ನಡುವೆ ಸುಮಾರು 20 ಕಿ.ಮೀ. ಅಂತರದಲ್ಲಿದೆ. ಸಣ್ಣ ಊರಾಗಿದ್ದು ತಂಗಲು ಹೆಚ್ಚು ಸೌಕರ್ಯಗಳಿಲ್ಲ. ದೇವಸ್ಥಾನವು ಶ್ವೇತಾದ್ರಿ ಎಂದು ಕರೆಯಲ್ಪಟ್ಟಿರುವ ಸಣ್ಣ ಗುಡ್ಡದ ಮೇಲೆ ಸ್ಥಾಪಿತವಾಗಿದೆ. ಇಲ್ಲಿ ಸಿಗುವ ಕಲ್ಲುಗಳೆಲ್ಲಾ ಬೆಳ್ಳಗಿರುವುದರಿಂದ ವೆಳ್ಳರೈ ಎಂದು ಹೆಸರು

ಮೂಲದೇವರು– ಪುಂಡರಿಕಾಕ್ಷನ್ ಮೂಲ ಮೂರ್ತಿಯ ಎಡ ಬಲಗಳಲ್ಲಿ ಸೂರ್ಯಚಂದ್ರರ ಪ್ರತಿಷ್ಠಾಪನೆ ಆಗಿದೆ. ಅಭಯ ಹಸ್ತವಿರುವ ನಿಂತಿರುವ ಮೂರ್ತಿ. ನಯನಗಳು ಸುಂದರವಾಗಿದ್ದು ಪುಂಡರೀಕಾಕ್ಷನೆಂಬ ಹೆಸರು ಅನ್ವರ್ಥವಾಗಿದೆ.

ದೇವರು ಈ ಕ್ಷೇತ್ರಕ್ಕೆ ಬರುವಾಗ ತಡವಾಗಿದ್ದು ತಾಯಾರ್ ಏಕೆ ತಡವಾಗಿ ಬಂದೆ ಎಂದು ಕೇಳಿದರು. ಆಗ ದೇವರು ಭಕ್ತರಿಗೆಲ್ಲಾ ಭೋಜನ ಕೊಟ್ಟು ಬರುವುದಕ್ಕೆ ತಡವಾಯಿತು ಎಂದು ಹೇಳಿದರು. ನಾಳಿಕೇಟ್ಟಾನ್ ವಾಸಲ್ ಎಂಬ ಹೊಸಿಲಲ್ಲಿ ತಾಯಾರ್ ಕೇಳಿದರೆಂದು ಪ್ರತೀತಿ ಇದೆ.

ಶಿಬಿ ಚಕ್ರವರ್ತಿ, ಶ್ವೇತ ವರಾಹ ಮೂರ್ತಿ(ಬಿಳಿ ಹಂದಿ)ಗೆ ದರ್ಶನ ಕೊಟ್ಟಿರುವರು. ಆ ಕಾರಣದಿಂದ ಈ ಕ್ಷೇತ್ರಕ್ಕೆ ತಿರುವೆಳ್ಳರೈ ಎಂಬ ಹೆಸರು ಬಂದಿದೆ.

ಸನ್ನಿಧಿಯನ್ನು ಪ್ರವೇಶಿಸಲು ಎರಡು ದ್ವಾರಗಳಿದ್ದು, ದಕ್ಷಿಣಾಯನದಲ್ಲಿ ಒಂದು ಬಾಗಿಲು ಹಾಗೂ ಉತ್ತರಾಯಣದಲ್ಲಿ ಒಂದು ಬಾಗಿಲನ್ನು ತೆರೆಯುತ್ತಾರೆ.

ಮೂಲವರ್ : ಪುಂಡರೀಕಾಕ್ಷನ್, ಚೆಂದಾಮರೈಕಣ್ಣನ್ (ನಿಂತಿರುವ ಮೂರ್ತಿ)

ತಾಯಾರ್ : ಚಂಪಕವಲ್ಲಿ, ಪಂಗಯಚೆಲ್ವಿ, ನಾಚ್ಚಿಯಾರ್

ತೀರ್ಥಂ : ದೇಗುಲದೊಳಗೆ 7 ತೀರ್ಥಗಳಿವೆ. 1. ದಿವ್ಯ ಗಂಧ ತೀರ್ಥಂ, 2. ಸುರ ಪುಷ್ಕರಣಿ, 3. ಕುಶ ತೀರ್ಥಂ, 4. ಸಕ್ಕರೆ ತೀರ್ಥಂ, 5. ಪುಷ್ಕಳ ತೀರ್ಥಂ, 6. ಪದ್ಮತೀರ್ಥಂ, 7. ವರಾಹ ಮಣಿಕನ್ನಿಕಾ ತೀರ್ಥಂ.

ವಿಮಾನಂ : ವಿಮಲಾಪುರಿ

ಪ್ರತ್ಯಕ್ಷಗೊಂಡಿರುವುದು : ಪೆರಿಯ ತಿರುವಡಿ, ಶಿಬಿ ಚಕ್ರವರ್ತಿ, ಭೂದೇವಿ, ಲಕ್ಷ್ಮಿ, ಮಾರ್ಕಂಡೇಯ, ಬ್ರಹ್ಮ, ರುದ್ರ

ಮಂಗಳಶಾಸನ ಮಾಡಿರುವವರು :

1. ಪೆರಿಯಾಳ್ವಾರ್, 2. ತಿರುಮಂಗೈ ಆಳ್ವಾರ್.

# 5. ತಿರುಅನ್ಬಿಲ್

॥ ಓಂ ಶ್ರೀಅಳಗಿಯವಲ್ಲಿ ಸಮೇತ ಶ್ರೀವಡಿವಳಗಿಯನಂಬಿ ಸ್ವಾಮಿನೇ ನಮಃ ॥

ಈ ಸನ್ನಿಧಿಯು ಲಾಲ್‌ಗುಡಿ ರೈಲ್ವೆಸ್ಟೇಷನ್ ಇಂದ 8 ಕಿ.ಮೀ. ದೂರದಲ್ಲಿದೆ. ತಿರುಚ್ಚಿಯಿಂದಲೂ ಸಹ ಬಸ್ ಸೌಕರ್ಯ ಉಂಟು. ಶ್ರೀರಂಗದಿಂದ, ಲಾಲ್‌ಗುಡಿಯು 13 ಕಿ.ಮೀ. ದೂರದಲ್ಲಿದೆ. ಬಸ್‌ಗಳು ಓಡಾಡುತ್ತವೆ.

ಈ ಸನ್ನಿಧಿಯು ಕಾವೇರಿಯ ಮತ್ತೊಂದು ಶಾಖೆಯಾದ ಕೊಲ್ಲಿಡಂ ನದಿಯ ಉತ್ತರ ದಡದಲ್ಲಿದೆ.

ಮೂಲವರ್ : ವಡಿವಡಗಿಯನಂಬಿ

ಉತ್ಸವರ್ : ಸುಂದರರಾಜನ್

ತಾಯಾರ್ : ಅಳಗಿಯವಲ್ಲಿ ನಾಚ್ಚಿಯಾರ್

ತೀರ್ಥಂ : ಮಂಡೂಕ ಪುಷ್ಕರಣಿ, ಕೊಲ್ಲಿಡಂ

ವಿಮಾನಂ : ತಾರಕ

ಪ್ರತ್ಯಕ್ಷಗೊಂಡಿರುವುದು : ಬ್ರಹ್ಮ, ವಾಲ್ಮೀಕಿ, ಶಿವ, ಊರ್ವಶಿ

ಮಂಗಳಶಾಸನ ಮಾಡಿರುವವರು :

1. ತಿರುಮಂಗೈ ಆಳ್ವಾರ್.

---

# ಪುರಾಣ ಸ್ಥಳಗಳು 19

1. ರಾಜಮನ್ನಾರ್‌ಗುಡಿ
2. ಶ್ರೀಮುಷ್ಣಂ
3. ಸಿಂಹಾಚಲಂ
4. ಶ್ರೀಕೂರ್ಮಂ
5. ಪುರಿ ಜಗನ್ನಾಥ್
6. ಗಯಾ ಕ್ಷೇತ್ರ
7. ಕಾಶಿ
8. ಪ್ರಯಾಗ (ಅಲಹಾಬಾದ್)
9, ಮಾಯಾ (ಹರಿದ್ವಾರ)
10. ಗುರುಕ್ಷೇತ್ರ



11. ಪುಷ್ಕರ್
12. ಅವಂತಿ (ಉಜ್ಜೈನಿ)
13. ಪಂಢರಾಪುರ
14. ಭದ್ರಾಚಲಂ
15. ತಿರುನಾರಾಯಣಪುರಂ (ಮೇಲುಕೋಟೆ)
16. ವರ್ಕಳಾ (ತಿರುವನಂತಪುರಂ)
17. ಸೇತುಕರ್ರೈ (ರಾಮೇಶ್ವರಂ)
18. ಧನುಷ್ಕೋಟಿ
19. ರಾಮೇಶ್ವರಂ

# 6. ತಿರುಪೇರ್‌ನಗರ್ (ಕೋಯಿಲಡಿ)

॥ ಓಂ ಶ್ರೀ ಇಂದ್ರಾದೇವಿ ಸಮೇತ ಶ್ರೀ ಅಪ್ಪಕೊಡುತ್ತಾನ್ ಸ್ವಾಮಿನೇ ನಮಃ ॥

ಇದು ಶ್ರೀರಂಗದ ಸಮೀಪ ಕೊಲ್ಲಡಂ ನದಿ ದಡದಲ್ಲಿದೆ. 4ನೇ ದಿವ್ಯದೇಶವಾದ ತಿರುಅನ್ಬಿಲ್‌ನಿಂದ ಕೊಲ್ಲಡಂ ನದಿಯನ್ನು ದಾಟಿದಲ್ಲಿ ಈ ಕ್ಷೇತ್ರವು ಸಿಗುತ್ತದೆ. ತಿರು ಅನ್ಬಿಲ್‌ನಿಂದ 4ಕಿ.ಮೀ. ಆಗುತ್ತದೆ. ಕಲ್ಲಣೈ ಎಂಬ ಸ್ಥಳದಿಂದ ಬಸ್ ಸೌಕರ್ಯವಿದೆ. ಕಲ್ಲಣೈಗೆ ಲಾಲ್‌ಗುಡಿಯಿಂದ ಹಾಗೂ ತಿರುಚ್ಚಿಯಿಂದ ಬಸ್ಸುಗಳು ಓಡಾಡುತ್ತವೆ. ದೇವಾಸ್ಥಾನವು ಸ್ವಲ್ಪ ಎತ್ತರದಲ್ಲಿದೆ.

ವಿಗ್ರಹ ಮೂರ್ತಿಯ ಬಲಗೈ ಕೆಳಗೆ ಒಂದು ಅಪ್ಪಗಳನ್ನು ತುಂಬಿರುವ ಪಾತ್ರೆ ಇರುವುದರಿಂದ ದೇವರಿಗೆ ಅಪ್ಪಕುಡತ್ತಾನ್ ಎಂಬ ಹೆಸರು ಬಂದಿದೆ. ವಿಗ್ರಹ ಮೂರ್ತಿಯು ಭುಜಂಗಶಯನನಾಗಿದ್ದು, ಆಕರ್ಷಕ ಮೂರ್ತಿ.

ಒಟ್ಟು 37 ಪಾಶುರಗಳನ್ನು ಆಳ್ವಾರುಗಳು ಹಾಡಿದ್ದಾರೆ. ಶ್ರೀ ನಮ್ಮಾಳ್ವಾರ್ ಮತ್ತು ತಿರುಮಂಗೈ ಆಳ್ವಾರು ಅವರುಗಳು ತಮ್ಮ ಪಾಶುರಗಳಲ್ಲಿ ಈ ಮೂರ್ತಿಯನ್ನು ಭಕ್ತಿಯಿಂದ ಸೇವಿಸಿದವರು ಮೋಕ್ಷವನ್ನ ಪಡೆಯುವುದರಲ್ಲಿ ಸಂದೇಹವಿಲ್ಲ. ಏತಕ್ಕೆಂದರೆ ಆ ದಿವ್ಯ ಮಂಗಳ ವಿಗ್ರಹದ ಸೌಂದರ್ಯವು ಭಕ್ತರ ಮನಸ್ಸನ್ನು ಬಿಟ್ಟು ಅಗಲುವುದೇ ಇಲ್ಲ ಎಂದು ಕೊಂಡಾಡಿದ್ದಾರೆ. ಶ್ರೀ ನಮ್ಮಾಳ್ವಾರ್ ಅವರು ಈ ಸ್ಥಳದಿಂದ ಮೋಕ್ಷವನ್ನು ಪಡೆದರು ಎಂತ ಐತಿಹ್ಯವಿದೆ.

ಇದನ್ನು ಪಂಚರಂಗ ಕ್ಷೇತ್ರ ಎನ್ನುತ್ತಾರೆ.

1. ಆದಿರಂಗ – ಶ್ರೀರಂಗ ಪಟ್ಟಣ (ಮೈಸೂರು)
2. ಅಪ್ಪಾಲರಂಗ – ತಿರುಪ್ಪೇರ್ ನಗರ್ (ಕೋವಿಲಡಿ)
3. ಮಧ್ಯರಂಗ – ಶ್ರೀರಂಗಂ
4. ಚತುರ್ಥ ರಂಗ – ಕುಂಭಕೋಣಂ
5. ಪಂಚರಂಗ – ತಿರುಇಂದಲೂರ್ (ಮಾಯಾವರಂ)

ಮೂಲವರ್ : ಶ್ರೀ ಅಪ್ಪಕೊಡುತ್ತಾನ್, ಅಪ್ಪಾಲರಂಗನಾಥನ್, ಭುಜಂಗಶಯನಂ

ತಾಯಾರ್ : ಇಂದ್ರಾ ದೇವಿ, ಕಮಲವಲ್ಲಿ

ತೀರ್ಥಂ : ಇಂದ್ರ ತೀರ್ಥಂ

ಸ್ಥಳ ವೃಕ್ಷಂ : ಬಿಲ್ವ

ವಿಮಾನಂ : ಇಂದ್ರ ವಿಮಾನ

ಪ್ರತ್ಯಕ್ಷಗೊಂಡಿರುವುದು : ಉಪಮನ್ಯು, ಪರಾಶರರ್

ಮಂಗಳಶಾಸನ ಮಾಡಿರುವವರು :

1. ಪೆರಿಯಾಳ್ವಾರ್, 2. ತಿರುಮಳಿಸೈ ಆಳ್ವಾರ್, 3. ತಿರುಮಂಗೈ ಆಳ್ವಾರ್, 4. ನಮ್ಮಾಳ್ವಾರ್

# 7. ತಿರುಕಂಡಿಯೂರ್

॥ ಓಂ ಶ್ರೀಕಮಲವಲ್ಲಿ ಸಮೇತ ಶ್ರೀಹರಶಾಪಹರ ಸ್ವಾಮಿನೇ ನಮಃ ॥

ತಂಜಾವೂರಿನಿಂದ ತಿರುವೈಯ್ಯಾರಿಗೆ ಹೋಗುವ ಮಾರ್ಗದಲ್ಲಿ ಸುಮಾರು 12 ಕಿ.ಮೀ. ದೂರದಲ್ಲಿ ಈ ಕ್ಷೇತ್ರವಿದೆ. ತಂಜಾವೂರಿನಿಂದ ಬಸ್ಸುಗಳು ಸಂಚರಿಸುತ್ತವೆ. ಹೆದ್ದಾರಿಯಲ್ಲಿ ದೇವಸ್ಥಾನವಿದೆ.

ಈ ಸನ್ನಿಧಿಯ ಹತ್ತಿರದಲ್ಲೆ, ಬ್ರಹ್ಮದೇವರ ಹಾಗೂ ರುದ್ರದೇವರ ದೇವಸ್ಥಾನಗಳುಂಟು. ಅದರಿಂದಾಗಿ ಈ ಕ್ಷೇತ್ರಕ್ಕೆ ತ್ರಿಮೂರ್ತಿ ಕ್ಷೇತ್ರವೆಂದು ಹೆಸರಿದೆ. ಕಮಲನಾಥನ ದೇವಸ್ಥಾನದಲ್ಲಿ, ಚಕ್ರತ್ತಾಳ್ವಾರ್(ಸುದರ್ಶನ ಚಕ್ರ) ಸನ್ನಿಧಿಯಿದೆ. ಈ ಮೂರ್ತಿಯು 'ವರಪ್ರಸಾದ' ಮೂರ್ತಿಯೆಂದು ಹೇಳುವುದುಂಟು. ಈ ಸ್ಥಳದಲ್ಲಿ ಶಿವನಿಗೆ ಬ್ರಹ್ಮಕಪಾಲ ಅಂಟಿಕೊಂಡಿತೆಂದು ಹೇಳಲಾಗಿದೆ. ಆದರೆ ಇಲ್ಲಿಯೇ ಬ್ರಹ್ಮಹತ್ಯಾ ದೋಷ ವಿಮೋಚನೆಯಾಯಿತು. ಆದ ಕಾರಣ ಇಲ್ಲಿನ ದೇವರಿಗೆ ಹರಶಾಪವಿಮೋಚನಾ ಎಂಬ ಹೆಸರು ಬಂದಿತು.

ಮೂಲವರ್ : ಶ್ರೀ ಹರಶಾಪವಿಮೋಚನಾ ಪೆರುಮಾಳ್ (ನಿಂತಿರುವ ಭಂಗಿ)

ಉತ್ಸವರ್ : ಕಮಲನಾಥನ್

ತಾಯಾರ್ : ಕಮಲವಲ್ಲಿ

ತೀರ್ಥಂ : ಕಪಾಲಮೋಕ್ಷ ಪುಷ್ಕರಣಿ, ಪದ್ಮ ತೀರ್ಥಂ, ಕಪಾಲ ತೀರ್ಥಂ

ವಿಮಾನಂ : ಕಮಲಾಕೃತಿ

ಪ್ರತ್ಯಕ್ಷಗೊಂಡಿರುವುದು : ಅಗಸ್ತ್ಯ, ಶಿವ

ಮಂಗಳಶಾಸನ ಮಾಡಿರುವವರು :

1. ತಿರುಮಂಗೈ ಆಳ್ವಾರ್



# 8. ತಿರುಕೂಡಲೂರ್

॥ ಓಂ ಪುಷ್ಪವಲ್ಲಿ ಸಮೇತ ಶ್ರೀವಯ್ಯಂಗಾತ್ತ ಪೆರುಮಾಳ್ ಸ್ವಾಮಿನೇ ನಮಃ ॥

ಕುಂಭಕೋಣದಿಂದ ತಂಜಾವೂರ್ ಮಾರ್ಗದಲ್ಲಿ ಅಯ್ಯಂಪೇಟೆ ಎಂಭ ಸ್ಥಳದಿಂದ 8ಕಿ.ಮೀ. ದೂರದಲ್ಲಿರುವ ಕ್ಷೇತ್ರ. ಅಯ್ಯಂಪೇಟೆಯಲ್ಲಿ ರೈಲ್ವೆ ಸ್ಟೇಷನ್ ಇದೆ. ತಿರುವೈಯ್ಯಾರಿನಿಂದ ಬಸ್‌ಗಳ ಅನುಕೂಲವೂ ಇದೆ. ಅಥವಾ ತಂಜಾವೂರ್ ಕುಂಭಕೋಣ ಮಾರ್ಗದಲ್ಲಿರುವ ಪಾಪನಾಶಂನಿಂದಲೂ ಸಹ ಬಸ್‌ಗಳೂ ಅಥವಾ ಆಟೋರಿಕ್ಷಾ ಟ್ಯಾಕ್ಸಿಯಲ್ಲಿ ಹೋಗಿಬರಹುದು. ಬಹಳ ಸಣ್ಣ ಊರಾಗಿದ್ದು, ವಸತಿ ಅಥವಾ ಇತರ ಸೌಕರ್ಯಗಳಿಲ್ಲ. ಮತ್ತೊಂದು ದಿವ್ಯದೇಶ ಕಪಿಸ್ಥಳ ಇಲ್ಲಿಂದ 6 ಕಿ.ಮೀ. ದೂರದಲ್ಲಿದೆ ಎರಡನ್ನು ಒಟ್ಟಿಗೆ ಸಂದರ್ಶಿಸಬಹುದು.

ಈ ಸ್ಥಳದಲ್ಲಿ ನಂದಕ ಮುನಿ ಸಮೇತ ಎಲ್ಲಾ ದೇವರುಗಳು ಈ ಪೆರುಮಾಳ್ ಹತ್ತಿರ ಹಿರಣ್ಯಾಕ್ಷನ ವಧೆಗಾಗಿ ಮನವಿ ಸಲ್ಲಿಸಲು ಬಂದರು. ಎಲ್ಲಾ ದೇವರು ಸೇರಿ ಪೆರುಮಾಳ್ ದರ್ಶನಕ್ಕಾಗಿ ಬಂದಿದ್ದರಿಂದ ಈ ಸ್ಥಳಕ್ಕೆ ಕೂಡಲೂರ್ ಎಂಬ ಹೆಸರು ಬಂದಿತು. ಕೂರ್ಮಾವತಾರಿಯಾದ ಭಗವಂತ ಭೂದೇವಿಯನ್ನು ರಕ್ಷಿಸಿ ಮೇಲಕ್ಕೆ ಬಂದ ಸ್ಥಳ.

ಮೂಲವರ್ : ಶ್ರೀ ವಯ್ಯಂಗಾತ್ತ ಪೆರುಮಾಳ್, ಜಗದ್ರಕ್ಷಕನ್

ಉತ್ಸವರ್ : ಜಗದ್ರಕ್ಷಕನ್

ತಾಯಾರ್ : ಪುಷ್ಪವಲ್ಲಿ, ಪದ್ಮಾಸಿನಿ

ತೀರ್ಥಂ : ಚಕ್ರತೀರ್ಥಂ

ವಿಮಾನಂ : ಶುದ್ಧ ಸತ್ವ

ಪ್ರತ್ಯಕ್ಷಗೊಂಡಿರುವುದು : ನಂದಕ ಮುನಿ ಮತ್ತು ಎಲ್ಲಾ ದೇವರು

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್

# 9. ತಿರುಕವಿತಲಮ್ (ಕಪಿಸ್ಥಳಂ)

॥ ಓಂ ರಮಾಮಣಿವಲ್ಲಿ ಸಮೇತ ಶ್ರೀಗಜೇಂದ್ರವರದನ್ ಸ್ವಾಮಿನೇ ನಮಃ ॥

ಕುಂಭಕೋಣಂ ಮತ್ತು ತಂಜಾವೂರು ನಡುವಿನ 'ಪಾಪನಾಶಂ' ಎಂಬ ಊರಿನಿಂದ 4ಕಿ.ಮೀ. ದೂರದಲ್ಲಿರುವ ಕ್ಷೇತ್ರ. ತಿರುವಯ್ಯಾರಿನಿಂದಲು ಸಹ ಬಸ್ ಸೌಕರ್ಯವುಂಟು. ಪಾಪನಾಶಂನಿಂದ ಆಟೋರಿಕ್ಷಾ, ಟ್ಯಾಕ್ಸಿಗಳು ಸಹ ದೊರೆಯುತ್ತವೆ.

ಗಜೇಂದ್ರನ ಕಾಲನ್ನು ಮೊಸಳೆ ಹಿಡಿದಾಗ ಗಜೇಂದ್ರನು 'ಓಂ ಆದಿಮೂಲಮೇ' ಎಂದು ಭಗವಂತನನ್ನು ಪ್ರಾರ್ಥಿಸಿದಾಗ ಭಗವಂತನು ಗಜೇಂದ್ರನಿಗೆ ಈ ಸ್ಥಳದಲ್ಲಿ ಅಭಯವನ್ನು ನೀಡಿದನು.

ಮೂಲವರ್ : ಶ್ರೀ ಗಜೇಂದ್ರ ವರದನ್ (ಭುಜಂಗಶಯನ)

ತಾಯಾರ್ : ರಮಾಮಣಿವಲ್ಲಿ

ತೀರ್ಥಂ : ಗಜೇಂದ್ರ ಪುಷ್ಕರಣಿ, ಕಪಿಲ ತೀರ್ಥಂ

ವಿಮಾನಂ : ಕಗನಾಕೃತಿ

ಪ್ರತ್ಯಕ್ಷಗೊಂಡಿರುವುದು : ಗಜೇಂದ್ರ

ಮಂಗಳಶಾಸನ ಮಾಡಿರುವವರು :

1. ತಿರುಮಳಿಸೈ ಆಳ್ವಾರ್



# 10. ತಿರುಪುಲ್ಲಂಬೂತಮ್‌ಗುಡಿ

॥ ಓಂ ಹೇಮಾಂಬುಜವಲ್ಲಿ ಸಮೇತ ಶ್ರೀವಲ್ವಿನ್‌ರಾಮ ಸ್ವಾಮಿನೇ ನಮಃ ॥

ಕುಂಭಕೋಣದ ಸಮೀಪದಲ್ಲಿರುವ ಸ್ವಾಮಿಮಲ್ಲೈ ರೈಲ್ವೆಸ್ಟೇಷನ್ ಇಂದ ಸುಮಾರು 6ಕಿ.ಮೀ. ದೂರದಲ್ಲಿ ಈ ಕ್ಷೇತ್ರವಿದೆ. ಸ್ವಾಮಿ ಮಲ್ಲೈನಿಂದ ಬಸ್‌ಗಳು ಉಂಟು. ಆದರೆ ಹೆಚ್ಚಾಗಿಲ್ಲ. ಸ್ವಾಮಿ ಮಲ್ಲೈನಿಂದ ಆಟೋರಿಕ್ಷಾದಲ್ಲಿ ಹೋಗಬಹುದು. ಸಣ್ಣ ಊರು. ಅಹೋಬಿಲ ಮಠದ ಒಂದು ಶಾಖೆಯೂ ಸಹ ಇದೆ.

ಮೂಲದೇವರ ಕೈಯಲ್ಲಿ ಬಲವಾದ ಧನಸ್ಸುಂಟು. ಉತ್ಸವ ಮೂರ್ತಿಯಾದ ರಾಮನಿಗೆ ಚತುರ್ಭುಜಗಳಿದ್ದು ಸುಂದರವಾದ ಮೂರ್ತಿ ಹಾಗೂ ಅಪರೂಪದ ವಿಗ್ರಹ ತೊಂಡರಪ್ಪಡಿ ಆಳ್ವಾರರ ಅವತಾರ ಸ್ಥಳವಾದ ಮಂಡಂಗುಡಿ ಇಲ್ಲಿಗೆ ಸಮೀಪದಲ್ಲಿದೆ.

ಶ್ರೀರಾಮ ಜಟಾಯುವಿಗೆ ಮೋಕ್ಷವನ್ನು ಕೊಟ್ಟು, ಸೀತಾದೇವಿ ವಿರಹಿಯಾಗಿ ದುಃಖಿತನಾಗಿರುವನು. ಇಲ್ಲಿ ಲಕ್ಷ್ಮಿ (ಸೀತೆ) ಇಲ್ಲ ಆದರೆ ಭೂಮಾದೇವಿ ಇದ್ದಾರೆ.

ಮೂಲವರ್ : ವಲ್ವಿಲ್ ರಾಮ (ಭುಜಂಗಶಯನ)

ತಾಯಾರ್ : ಹೇಮಾಂಬುಜವಲ್ಲಿ

ತೀರ್ಥಂ : ಜಟಾಯು ತೀರ್ಥಂ, ಕೃತ್ರ ತೀರ್ಥಂ

ವಿಮಾನಂ : ಶೋಭನ

ಪ್ರತ್ಯಕ್ಷಗೊಂಡಿರುವುದು : ಕೃತ್ರರಾಜನ್

ಮಂಗಳಶಾಸನ ಮಾಡಿರುವವರು :

1.ತಿರುಮಂಗೈಆಳ್ವಾರ್



# 11. ತಿರುಆದನೂರ್

**॥ ಓಂ ಶ್ರೀರಂಗನಾಯಕಿ ಸಮೇತ ಶ್ರೀಆಂಡಳಕ್ಕುಂ ಅಯ್ಯನ್ ಸ್ವಾಮಿನೇ ನಮಃ ॥**

ಸ್ವಾಮಿ ಮಲೈಯಿಂದ ಸುಮಾರು 3 ಕಿ.ಮೀ ದೂರದಲ್ಲಿರುವ ಈ ಕ್ಷೇತ್ರಕ್ಕೆ ಕುಂಭಕೋಣದಿಂದ ಬಸ್ ಸೌಕರ್ಯವುಂಟು, ಸ್ವಾಮಿಮಲೈನಿಂದ ಆಟೋರಿಕ್ಷಾದಲ್ಲೂ ಸಹ ಹೋಗಿ ಬರಬಹುದು. ಪುಳ್ಳಂ ಭೂತಂಗುಡಿಯಿಂದ 1 ಕಿ.ಮೀ. ದೂರದಲ್ಲಿ ಇರುವುದರಿಂದ ಪುಳ್ಳಂಘೂತಗುಡಿ ಹಾಗೂ ಈ ಕ್ಷೇತ್ರವನ್ನು ಒಟ್ಟಿಗೆ ಸಂದರ್ಶಿಸಬಹುದು. ಬಹಳ ಸಣ್ಣ ಊರು, ವಸತಿ ಸೌಕರ್ಯವಾಗಲಿ, ಇತರ ಸೌಕರ್ಯವಾಗಲಿ ಇಲ್ಲ. ಸ್ವಾಮಿ ಮಲೈ ಕುಂಭಕೋಣಂನ ಸಮೀಪದಲ್ಲಿದೆ.

ತಿರುಮಂಗೈ ಆಳ್ವಾರ್ ಮತ್ತು ಕಾಮಧೇನುವಿಗೆ ಪ್ರತ್ಯಕ್ಷ. ಗರ್ಭಗೃಹದ ಒಳಭಾಗದಲ್ಲಿ ತಿರುಮಂಗೈ ಆಳ್ವಾರರ ವಿಗ್ರಹವುಂಟು. ಈ ದೇವಸ್ಥಾನದ ಅರ್ಚಕರು ಪುಳ್ಳಂಭೂತಗುಡಿಯಲ್ಲಿ ವಾಸಿಸುತ್ತಾರೆ. ಪ್ರಾತಃ ಕಾಲ 10 ಗಂಟೆಯ ಒಳಗಾಗಿ ಹೋಗುವುದು ಉತ್ತಮ.

ಈ ದೇವರು ಭಕ್ತಾದಿಗಳಿಗೆ ಧಾನ್ಯಗಳನ್ನು ಸೇರಿನಲ್ಲಿ ಅಳತೆ ಮಾಡಿ ಕೊಟ್ಟು ಸುಸ್ತಾಗಿ ಅದೇ ಸೇರನ್ನು ತಲೆದಿಂಬಾಗಿ ಇಟ್ಟುಕೊಂಡು ಎಡಗೈಯಲ್ಲಿ ತಾಳೆಗರಿ ಮತ್ತೊಂದು ಕೈಯಲ್ಲಿ ಲೇಖನಿಯನ್ನು ಹಿಡಿದು ಭುಜಂಗ ಶಯನದಲ್ಲಿ ಇದ್ದಾರೆ. ಈ ದೇವರ ದರ್ಶನ ಪಡೆದರೆ ತಮ್ಮ ಕಷ್ಟಗಳು ಪರಿಹಾರವಾಗುತ್ತದೆ. ಆದ ಕಾರಣ ಈ ದೇವರಿಗೆ ಆಂಡಳಕ್ಕುಮ್ ಅಯ್ಯನ್ (ಧಾನ್ಯಗಳನ್ನು ನೀಡುವವ)ಎಂಬ ಹೆಸರು ಬಂದಿತು.

**ಮೂಲವರ್ : ಶ್ರೀ ಆಂಡಳಕ್ಕುಮ್ ಅಯ್ಯನ್ (ಭುಜಂಗ ಶಯನಂ)**
**ಉತ್ಸವರ್ : ಅಳಗಿಯ ಮನವಾಳನ್**
**ತಾಯಾರ್ : ಶ್ರೀ ರಂಗನಾಯಕಿ**
**ತೀರ್ಥಂ : ಸೂರ್ಯ ಪುಷ್ಕರಣಿ**
**ಸ್ಥಳ ವೃಕ್ಷಂ : ಪುನ್ನೈ ಪಾಡಲಿ**
**ವಿಮಾನಂ : ಪ್ರಣವಾಕೃತಿ**
**ಪ್ರತ್ಯಕ್ಷಗೊಂಡಿರುವುದು : ತಿರುಮಂಗೈ ಆಳ್ವಾರ್, ಕಾಮಧೇನು, ಪಿರುಗು ಮುನಿ, ಅಗ್ನಿ**

**ಮಂಗಳಶಾಸನ ಮಾಡಿರುವವರು :**

**1. ತಿರುಮಂಗೈಆಳ್ವಾರ್**

# 12. ತಿರುಕುಡಂದೈ (ಕುಂಭಕೋಣಂ)

॥ ಓಂ ಶ್ರೀಕೋಮಲವಲ್ಲಿ ಸಮೇತ ಶ್ರೀಸಾರಂಗಪಾಣಿ ಸ್ವಾಮಿನೇ ನಮಃ ॥

ಪ್ರಸಿದ್ಧವಾದ ಸ್ಥಳ, ತಿರುಚ್ಚಿ ಹಾಗೂ ಇತರ ಎಲ್ಲಾ ಕಡೆಗಳಿಂದ ಬಸ್ ಸೌಕರ್ಯಗಳಂಟು ರೈಲ್ವೆ ಸ್ಟೇಷನ್ ಸಹ ಇದೆ.

ಪಾಂಚರಾತ್ರ ಆಗಮ ರೀತ್ಯಾ ಪೂಜೆಗಳು ನಡೆಯುತ್ತವೆ. ಈ ಕ್ಷೇತ್ರದಲ್ಲಿ ಹೇಮಮಹರ್ಷಿಯು ತಪಸ್ಸು ಮಾಡುತ್ತಿದ್ದಾಗ, ಒಂದು ಹೆಣ್ಣು ಶಿಶುವು ಅವರಿಗೆ ಕಮಲ ಪುಷ್ಕರಿಣಿಯಲ್ಲಿ ದೊರೆತು, ಅವರು ಅದನ್ನು ಸಾಕಿದರು. ಅವಳಿಗೆ ವಿವಾಹ ಯೋಗ್ಯವಾದ ವಯಸ್ಸು ಪ್ರಾಪ್ತವಾದಾಗ, ಮಹರ್ಷಿಯ ಪ್ರಾರ್ಥನೆಯ ಮೇರೆಗೆ, ಶ್ರೀ ಮಹಾವಿಷ್ಣುವೇ ಸ್ವರ್ಣ ರಥದಲ್ಲಿ ಬಂದು ಆ ಹುಡುಗಿಯನ್ನು ವಿವಾಹವಾಗಿ ರಥದಲ್ಲಿಯೇ ಆ ಸ್ಥಳದಲ್ಲಿ ನಿಂತನೆಂದು ಪ್ರತೀತಿ. ಈಗಲೂ ರಥದ ಚಕ್ರಗಳು ದೇವಸ್ಥಾನದ ಪ್ರಾಕಾರದ ಎರಡೂ ಕಡೆಗಳಿವೆ.

ಗರ್ಭಗೃಹಕ್ಕೆ ಎರಡು ದ್ವಾರಗಳಿದ್ದು ಒಂದನ್ನು ಉತ್ತರಾಯಣದಲ್ಲೂ, ಮತ್ತೊಂದನ್ನು ದಕ್ಷಿಣಾಯನದಲ್ಲೂ ತೆರೆಯುತ್ತಾರೆ.

ಮೂಲಮೂರ್ತಿಯು ಬಹು ಸುಂದರವಾಗಿದ್ದು, ಬಹಳ ಆಕರ್ಷಕವಾಗಿದೆ. ಉತ್ಸವ ಮೂರ್ತಿಯಂತೂ ಅತ್ಯಂತ ಮನ ಮೋಹಕವಾಗಿದೆ.

ತಿರುಮಂಗೈ ಆಳ್ವಾರ್ ಅವರು, ತಮ್ಮ ಒಂದು ಪಾಶುರದಲ್ಲಿ ತಿರುಕ್ಕುಡಂದೈಯಲ್ಲಿ ಏಕೆ ಮಲಗಿದ್ದೀಯೇ ಏಳು, ಎದ್ದೇಳು ಎಂದು ಭಕ್ತಿ ಭಾವಪೂರಿತವಾಗಿ ಹಾಡಿದಾಗ, ಸಾರಂಗಪಾಣಿ ಸ್ವಾಮಿಯು ಶಯನ ಭಂಗಿಯಿಂದ ಎದ್ದುದ್ದಾಗಿಯೂ, ಆಗ ಆಳ್ವಾರ್‌ರವರು ಅವನ ಕರುಣಾ ಪ್ರವಾಹಕ್ಕೆ ಮಾರುಹೋಗಿ ಪಶ್ಚಾತ್ತಾಪ ಪಟ್ಟು "ವಾದಿಕೇಶನ್" ಎಂಬ ಪಾಶುರವನ್ನು ಹಾಡಲಾಗಿ, ಪರಮಾತ್ಮನು ಏಳುವುದನ್ನು ನಿಲ್ಲಿಸಿ, ಸ್ವಲ್ಪ ಎದ್ದ ಭಂಗಿಯಲ್ಲೆ ದರ್ಶನ ನೀಡುತ್ತಿರುವುದಾಗಿ ಇತಿಹಾಸ ಉಂಟು. ಇದನ್ನೇ ಉದ್ಯೋಗಶಯನ ಅಥವಾ ಉತ್ಥಾನ ಶಯನವೆಂದು ಕರೆಯುತ್ತಾರೆ.

ಈ ದೇವಸ್ಥಾನವು ಶ್ರೀ ವೈಷ್ಣವ ಸಿದ್ಧಾಂತದ ಉಗಮದಲ್ಲಿ ಬಹಳ ಮುಖ್ಯ ಪಾತ್ರವನ್ನು ವಹಿಸಿದೆ. ಶ್ರೀ ಮನ್ನಾಥಮುನಿಗಳು(ಆಚಾರ್ಯತ್ರಯರಲ್ಲಿ

ಮೊದಲನೆಯವರು) ಈ ಸನ್ನಿಧಿಗೆ ಭೇಟಿ ನೀಡಿದಾಗ, ಕೆಲವು ಶ್ರೀ ವೈಷ್ಣವರು ಹಾಡಿದ (ಮೇಲುನಾಡಿನಿಂದ ಬಂದವರು)ನಮ್ಮಾಳ್ವಾರ್ ಅವರ ದಿವ್ಯ ಪಾಶುರಗಳಾದ "ಅರಾವಮುದೆ" ಹಾಡುಗಳನ್ನು ಕೇಳಿ, ಬಾಕಿ 990ಪಾಶುರಗಳ ಬಗ್ಗೆ ವಿಚಾರಣೆ ಮಾಡಲಾಗಿ ಅವು ತಮಗೆ ತಿಳಿಯದೆಂದು ಆ ಶ್ರೀ ವೈಷ್ಣವರು ತಿಳಿಸಿದರು. ಆಗ ಶ್ರೀನಾಥಮುನಿಗಳು ತಪಸ್ಸನ್ನಾಚರಿಸಿ ನಮ್ಮಾಳ್ವಾರ್‌ರವರನ್ನು ಸಾಕ್ಷಾತ್ಕರಿಸಿಕೊಂಡು ಬಾಕಿ ಉಳಿದ "ನಾಲಾಯಿರ ಪ್ರಬಂಧ" ವನ್ನು ಅವರಿಂದ ಅಧಿಕರಿಸಿ, ನಂತರ ಅದನ್ನು ಪ್ರಚುರಪಡಿಸುದುದಾಗಿ ಚರಿತ್ರೆ ಉಂಟು.

ಅಲ್ಲದೆ ಒಂದಾನೊಂದು ಸಂದರ್ಭದಲ್ಲಿ ಒಬ್ಬ ಅಂತರಂಗ ಭಕ್ತನು ಮೃತನಾದಾಗ, ಅವನಿಗೆ ಅಂತ್ಯ ಸಂಸ್ಕಾರಗಳನ್ನು ಮಾಡಲು ಯಾರೂ ಇಲ್ಲದಾಗಿ, ಸಾರಂಗಪಾಣಿಯ ಆಜ್ಞೆಯ ಮೇರೆಗೆ ದೇವಸ್ಥಾನದ ಅರ್ಚಕರೇ ಉತ್ತರ ಕ್ರಿಯೆಗಳನ್ನು ನಡೆಸಿದುದಾಗಿಯೂ ಈಗಲೂ ಸಹ ಆ ತಿಥಿಯಂದು ಅರ್ಚಕರು ದರ್ಭೆಯನ್ನು ಪರಮಾತ್ಮನ ಕೈಯಿಂದ ಮುಟ್ಟಿಸಿ ಶ್ರಾದ್ಧವನ್ನು ನಡೆಸುವುದಾಗಿ ತಿಳಿದಿದೆ. ಈ ದೇವರನ್ನು "ಆರಾವಮುದಾಳ್ವಾನ್" ಎಂದು ನಾಥಮುನಿಗಳು ಕರೆದಿದ್ದಾರೆ.

ಮೂಲವರ್ : ಶ್ರೀ ಸಾರಂಗಪಾಣಿ, ಆರಾವಮುದನ್
ಉತ್ಸವರ್ : ಶ್ರೀ ಸಾರಂಗಪಾಣಿ, ಆರಾವಮುದನ್
ತಾಯಾರ್ : ಕೋಮಲವಲ್ಲಿ (ಪಡಿತಾಂಡಪತ್ನಿ) (ಹೊಸಿಲು ದಾಟದ ಪತ್ನಿ)
ತೀರ್ಥಂ : ಹೇಮ ಪುಷ್ಕರಣಿ
ವಿಮಾನಂ : ವೈದಿಕ ವಿಮಾನಂ
ಪ್ರತ್ಯಕ್ಷಗೊಂಡಿರುವುದು : ಹೇಮ ಮಹರ್ಷಿ

ಮಂಗಳಶಾಸನ ಮಾಡಿರುವವರು :

1. ಪೆರಿಯಾಳ್ವಾರ್, 2. ಆಂಡಾಳ್, 3. ತಿರುಮಳಿಶೈ ಆಳ್ವಾರ್, 4. ತಿರುಮಂಗೈಆಳ್ವಾರ್, 5. ಬೂದತ್ತಾಳ್ವಾರ್, 6. ಪೇಯಾಳ್ವಾರ್, 7. ನಮ್ಮಾಳ್ವಾರ್

# 13. ತಿರುವಿನ್ನಗರ್ (ಉಪ್ಪಿಲಿಯಪ್ಪನ್ ಕೋಯಿಲ್)

॥ ಓಂ ಶ್ರೀಭೂಮಿದೇವಿ ಸಮೇತ ಶ್ರೀಒಪ್ಪಿಳಿಯಪ್ಪ ಸ್ವಾಮಿನೇ ನಮಃ ॥

ಈ ಕ್ಷೇತ್ರವನ್ನು "ದಕ್ಷಿಣದ ತಿರುಪತಿ" ಎಂದು ಕರೆಯುತ್ತಾರೆ. ತಿರುನಾಗೇಶ್ವರ ರೈಲ್ವೆಸ್ಟೇಷನ್ ಇಂದ 1ಕಿ.ಮೀ. ದೂರದಲ್ಲಿದೆ. ಕುಂಭಕೋಣದಿಂದ 8 ಕಿ.ಮೀ.ದೂರದಲ್ಲಿದ್ದು ಬಸ್ಸು ಸಂಚಾರ ಉತ್ತಮವಾಗಿದೆ.

ಗರುಡನಿಗೂ, ಮಾರ್ಕಂಡೇಯರಿಗೂ ಪ್ರತ್ಯಕ್ಷ. ಇಲ್ಲಿನ ಪೂಜಾವಿಧಾನಗಳು ವೈಖ್ಯಾನಸ ಆಗಮ ರೀತ್ಯಾ ನಡೆಯುತ್ತವೆ. ವಿಗ್ರಹ ಮೂರ್ತಿಯು ಹೆಚ್ಚು ಕಮ್ಮಿ ತಿರುಮಲೈನಲ್ಲಿರುವ ವೆಂಕಟೇಶನ ಮೂರ್ತಿಯಂತಿದೆ. ಈ ದೇವರ ಶ್ರೀಮತಿಯವರಿಗೆ ಅಡುಗೆ ಮಾಡಲು ಬರದೆ ಒಂದು ದಿನ ಉಪ್ಪಿಲ್ಲದ ಅಡುಗೆ ಮಾಡಿ ಪತಿಗೆ ಬಡಿಸಿ, ಭೋಜನ ಹೇಗಿದೆ ಎಂದು ಕೇಳಿದರು. ದೇವರು ಊಟ ಮಾಡಿ ಬಹಳ ಅಮೃತದಂತಿದೆ ಎಂದರು. ನಂತರ ಪತ್ನಿಯು ಊಟ ಮಾಡುವಾಗ ಆ ಊಟದಲ್ಲಿ ಉಪ್ಪೇ ಇಲ್ಲದಿರುವುದು ಗೊತ್ತಾಯಿತು. ಆಗ ಆಕೆಯು ಪತಿಯನ್ನು 'ಏನು ಸ್ವಾಮಿ ಈ ಊಟದಲ್ಲಿ ಉಪ್ಪೇ ಇಲ್ಲ, ಆದರೂ ಊಟ ಅಮೃತದಂತಿದೆ ಎಂದು ಹೇಳಿದಿರಲ್ಲಾ' ಎಂದು ಕೇಳಿದರು. ಆಗ ದೇವರು 'ಪತ್ನಿಯು ಮಾಡುವ ಅಡುಗೆಯು ಹೇಗೇ ಇದ್ದರೂ ಬಹಳ ಚೆನ್ನಾಗಿದೆಯೆಂದೇ ಹೇಳಬೇಕು. ಇಲ್ಲದಿದ್ದಲ್ಲಿ ಅವರಿಗೆ ಅಡುಗೆ ಮಾಡಲು ಉತ್ಸಾಹ ಬರುವುದಿಲ್ಲ. ಇನ್ನು ಮುಂದೆ ನಮ್ಮ ಪೂಜೆಯಲ್ಲಿ ಉಪ್ಪು ಇಲ್ಲದ ಪದಾರ್ಥಗಳನ್ನೇ ಪ್ರಸಾದವಾಗಿ ಸ್ವೀಕರಿಸುತ್ತೇನೆ' ಎಂದು ಹೇಳಿದರು. ಆ ಕಾರಣದಿಂದ ಈ ದೇವರಿಗೆ 'ಉಪ್ಪಿಲ್ಲಾದ ಅಪ್ಪನ್' ಎಂಬ ಹೆಸರು ಬಂದಿತು. ಈ ದೇವಸ್ಥಾನದಲ್ಲಿ ಉಪ್ಪು ಸೇರಿಸುವ ಯಾವ ಪದಾರ್ಥವನ್ನು ಪರಮಾತ್ಮನ ನೈವೈದ್ಯಕ್ಕೆ ಇಡುವುದಿಲ್ಲ. ಈ ದೇಗುಲದೊಳಗೆ ಉಪ್ಪು ಇರುವ ಪದಾರ್ಥಗಳನ್ನು ಭಕ್ತರು ತೆಗೆದುಕೊಂಡು ಹೋಗುವುದಿಲ್ಲ. ನಿಯಮ ತಪ್ಪಿದಲ್ಲಿ ನರಕ ಪ್ರಾಪ್ತಿಯಾಗುತ್ತದೆ.

ಮೂಲವರ್ : ಒಪ್ಪಿಳಿಯಪ್ಪನ್ (ಶ್ರೀನಿವಾಸನ್) ನಿಂತಿರುವ ಭಂಗಿ
ಉತ್ಸವರ್ : ಒಪ್ಪಿಳಿಯಪ್ಪನ್
ತಾಯಾರ್ : ಭೂಮಿ ದೇವಿ (ಭೂಮಿ ನಾಚ್ಚಿಯಾರ್)
ತೀರ್ಥಂ : ಆರತಿ ಪುಷ್ಕರಣಿ
ವಿಮಾನಂ : ವಿಷ್ಣು ವಿಮಾನಂ, ಶುದ್ಧಾನಂದ ವಿಮಾನಂ
ಪ್ರತ್ಯಕ್ಷಗೊಂಡಿರುವುದು : ಮಾರ್ಕಂಡೇಯ, ಕಾವೇರಿ, ಧರ್ಮ ದೇವತೆ

ಮಂಗಳಶಾಸನ ಮಾಡಿರುವವರು :

1.ತಿರುಮಂಗೈಆಳ್ವಾರ್, 2. ಪೇಯಾಳ್ವಾರ್, 3. ನಮ್ಮಾಳ್ವಾರ್

# 14. ತಿರುನರೈಯೂರ್ (ನಾಚ್ಚಿಯಾರ್ ಕೋಯಿಲ್)

॥ ಓಂ ಶ್ರೀವಂಜುಳಾದೇವಿ ಸಮೇತ ಶ್ರೀಶ್ರೀನಿವಾಸ ಸ್ವಾಮಿನೇ ನಮಃ ॥

ಈ ಕ್ಷೇತ್ರಕ್ಕೆ ನಾಚ್ಚಿಯಾರ್ ಕೋಯಿಲ್ ಎಂಬ ಪ್ರಸಿದ್ಧವಾದ ಹೆಸರುಂಟು. ಕುಂಭಕೋಣದಿಂದ 10 ಕಿ.ಮೀ ದೂರದಲ್ಲಿ ತಿರುವಾರೂರು ಮಾರ್ಗದಲ್ಲಿದೆ.

ಈ ಕ್ಷೇತ್ರದಲ್ಲಿಯೇ ಶ್ರೀ ವಿಷ್ಣುವು ಮಹಾಲಕ್ಷ್ಮಿಯನ್ನು ಮದುವೆ ಆದುದಾಗಿಯೂ, ಮಹಾಲಕ್ಷ್ಮಿಯನ್ನು ಬೆಳೆಸಿ ಶ್ರೀನಿವಾಸನಿಗೆ ಮದುವೆ ಮಾಡಿಸಿದ ಋಷಿ ಮೇಧಾವಿಗೆ ಪರಮಾತ್ಮನು ಈ ಕೆಳಕಂಡವರಗಳನ್ನು ಇತ್ತುದಾಗಿಯೂ ಇತಿಹಾಸವಿದೆ.

1. ಈ ಕ್ಷೇತ್ರದಲ್ಲಿ ಜನಿಸುವ ಎಲ್ಲಾ ಚೇತನರುಗಳು ಮೋಕ್ಷವನ್ನು ಹೊಂದುವರೆಂದು

2. ದೇವಸ್ಥಾನದ ಎಲ್ಲಾ ಕಾರ್ಯಗಳಲ್ಲೂ, ಮಹಾಲಕ್ಷ್ಮೀಗೆ ಮೊದಲ ಮರ್ಯಾದೆ. ಆದ್ದರಿಂದಲೇ ಈ ಕ್ಷೇತ್ರಕ್ಕೆ ನಾಚ್ಚಿಯಾರ್ ಕೋಯಿಲ್ ಎಂದು ಹೆಸರು ಬಂದಿದೆ.

ಶ್ರೀ ತಿರುಮಂಗೈ ಆಳ್ವಾರ್ ಈ ಕ್ಷೇತ್ರದಲ್ಲಿಯೇ ತಾವು ಶ್ರೀವೈಷ್ಣವನಾಗಲು ಶ್ರೀನಿವಾಸನನ್ನು ಪ್ರಾರ್ಥಿಸಿದ ಕಾರಣ ಅವರು ಮೆಚ್ಚಿದ ಕುಮುದವಲ್ಲಿಯು ಶ್ರೀ ವೈಷ್ಣವನನ್ನು ಅಲ್ಲದೆ ಬೇರೆಯವರನ್ನು ಮದುವೆ ಆಗುವುದಿಲ್ಲವೆಂದು ವ್ರತ ತೊಟ್ಟಿದ್ದರಿಂದ ಗರ್ಭಗುಡಿಯು ಎತ್ತರದಲ್ಲಿದ್ದು ಮೆಟ್ಟಿಲುಗಳನ್ನು ಹತ್ತಬೇಕು.

ಮೂಲ ಮೂರ್ತಿಯು ಎರಡು ಕೈಗಳನ್ನು ಮಾತ್ರ ಹೊಂದಿದ್ದು ಅಮ್ಮನವರಿಗೆ ಬೇರೆ ಸನ್ನಿಧಿಯಿಲ್ಲ. ಈ ದೇವರು ಮನೆ ಅಳಿಯನಾಗಿ ಹೋದ ಕಾರಣ ಆ ಊರಿನ ಹೆಸರು ನಾಚ್ಚಿಯಾರ್ ಕೋಯಿಲ್ ಎಂಬ ಹೆಸರು ಬಂದಿತು. ಶ್ರೀನಿವಾಸನು ಮನೆ ಅಳಿಯನಾದ ಮೇಲೆ ಖಜಾನೆ ಬೀಗವನ್ನು ತನ್ನ ಶ್ರೀಮತಿಗೆ ನೀಡಿದನು. ಇಂದೂ ಸಹ ನಾಚ್ಚಿಯಾರ್‌ನ ಬಲ ಸೊಂಟದಲ್ಲಿ ಬಂಗಾರದ ಖಜಾನೆ ಬೀಗವನ್ನು ಕಾಣಬಹುದು.

ಈ ದೇವಸ್ಥಾನದ ಮತ್ತೊಂದು ವಿಶೇಷವೆಂದರೆ, ಕಲ್ಲಿನ ಗರುಡನ ಮೂರ್ತಿ, ಈ ಮೂರ್ತಿಯನ್ನು ಹೊರಕ್ಕೆ ತೆಗೆಯಬಹುದಾಗಿದ್ದು, ಅದರ ಮೇಲೆಯೇ ವರ್ಷಕ್ಕೆ ಎರಡು ಬಾರಿ ಉತ್ಸವವು ನಡೆಯುತ್ತದೆ. ಭಕ್ತರು "ಅಮೃತ ಕಲಶ" ನೈವೇದ್ಯವನ್ನು ಸಮರ್ಪಿಸುವುದು ವಾಡಿಕೆ.

ಒಬ್ಬ ಶಿಲ್ಪಿಯು ಕಲ್ಲಿನ ಗರುಡ ವಿಗ್ರಹವನ್ನು ಕೆತ್ತಿದನು. ಆ ವಿಗ್ರಹವು ಬಹಳ ಸುಂದರವಾಗಿದ್ದು ಅದನ್ನು ಅಪ್ಪಿಕೊಂಡಾಗ ಆ ವಿಗ್ರಹವು ಮೇಲಕ್ಕೆ ಹಾರಿತು. ಆಗ ಆ ಶಿಲ್ಪಿಗೆ ಕೋಪ ಬಂದು ಕೈಯಲ್ಲಿದ್ದ ಉಳಿಯಿಂದ ಅದಕ್ಕೆ ಬೀಸಿ ಹೊಡೆದನು. ಆ ಗರುಡ ವಿಗ್ರಹವು ಕೆಳಗೆ ಬಿದ್ದು ತುಂಬಾ ಆಕ್ರೋಶಗೊಂಡಿತು. ನಾಲ್ಕು ಜನ ಅರ್ಚಕರು ಆ ವಿಗ್ರಹವನ್ನು ತೆಗೆದು ಹೊಸಲಿನ ಮೇಲೆ ಇಡುತ್ತಾರೆ. ಅಲ್ಲಿಂದ ಎಂಟು ಜನ ಅರ್ಚಕರು ಎರಡನೇ ಬಾಗಿಲಿಗೆ ತರುತ್ತಾರೆ. ಮತ್ತೆ ಅಲ್ಲಿಂದ ಹದಿನಾರು ಜನ ಅರ್ಚಕರು ಮೂರನೇ ಬಾಗಿಲಿಗೆ ಕೊಂಡು ತರುತ್ತಾರೆ. ಅದೇ ರೀತಿ 32, 64, 128 ಜನರಿಂದ ಆ ಗರುಡ ವಾಹನ ವಿಗ್ರಹ ಮೆರವಣಿಗೆ ತರುತ್ತಾರೆ. ಅದೇ ರೀತಿ ಹಿಂತಿರುಗುವಾಗ ಅಂದರೆ ಗರ್ಭಗುಡಿ ಸೇರುವಾಗ 128, 64, 32, 16, 8, 4 ಜನ ಅರ್ಚಕರಿಂದ ತರಲ್ಪಡುತ್ತದೆ.

ಮದುವೆ ಆಗದವರು ಏಳು ಗುರುವಾರಗಳು ಕಲ್ಲಿನ ಗರುಡನ ಪೂಜೆ ಮಾಡಿದರೆ ಬೇಗ ಮದುವೆಯಾಗುತ್ತದೆ.

ಶ್ರೀ ತಿರುಮಂಗೈ ಆಳ್ವಾರ್ ಅವರು 100 ಪದ್ಯಗಳನ್ನು ಹಾಡಿರುವ ಎರಡು ಕ್ಷೇತ್ರಗಳಲ್ಲಿ ಇದೂ ಒಂದು. ಇನ್ನೊಂದು ತಿರುಕ್ಕಣ್ಣಪುರಂ.

ಮೂಲವರ್ : ಶ್ರೀನಿವಾಸನ್, ವಾಸುದೇವನ್, ತಿರುನರೈಯೂರ್ ನಂಬಿ

ತಾಯಾರ್ : ವಂಜುಳವಲ್ಲಿ, ನಂಬಿಕ್ಕೈ ನಾಚ್ಚಿಯಾರ್

ತೀರ್ಥಂ : ಸಂಕರ್ಷಣ ತೀರ್ಥ, ಮಣಿಮುಕ್ತಾ ಪುಷ್ಕರಣಿ, ಪ್ರದ್ಯುಮ್ನ ತೀರ್ಥ, ಅನಿರುದ್ಧ ತೀರ್ಥ, ಸಾಂಬ ತೀರ್ಥ

ಸ್ಥಳ ವೃಕ್ಷಂ : ಬಿಲ್ವ ವೃಕ್ಷಂ, ವಗುಳ ಮರಂ

ವಿಮಾನಂ : ಶ್ರೀನಿವಾಸ, ಹೇಮ ವಿಮಾನಂ

ಪ್ರತ್ಯಕ್ಷಗೊಂಡಿರುವುದು : ಮೇದಾವಿ ಮುನಿ (ನಾಚ್ಚಿಯಾರ್ ತಂದೆ), ಬ್ರಹ್ಮ

ಮಂಗಳಶಾಸನ ಮಾಡಿರುವವರು :

1. ತಿರುಮಂಗೈ ಆಳ್ವಾರ್

# 15. ತಿರುಚೇರ್ರೈ (ಪಂಚಸಾರ ಕ್ಷೇತ್ರ)

॥ ಓಂ ಶ್ರೀಸಾರನಾಯಕಿ ಸಮೇತ ಶ್ರೀಸಾರನಾಥ ಸ್ವಾಮಿನೇ ನಮಃ ॥

ಕುಂಭಕೋಣದಿಂದ 11 ಕಿ.ಮೀ. ದಕ್ಷಿಣಕ್ಕಿರುವ ಕ್ಷೇತ್ರ. ಕುಂಬಕೋಣದಿಂದ ಟೌನ್ ಬಸ್‌ಗಳು ಓಡಾಡುತ್ತವೆ. ತಿರುವಾರೂರು– ಕುಂಭಕೋಣ ಮಾರ್ಗದಲ್ಲಿದೆ. ನಾಚ್ಚಿಯಾರ್ ಕೋಯಿಲ್ ಇಂದ 5 ಕಿ.ಮೀ. ದೂರದಲ್ಲಿದೆ. ನಾಚ್ಚಿಯಾರ್ ಕೋಯಿಲ್‌ನಿಂದ ಆಟೋರಿಕ್ಷಾಗಳೂ ಸಹ ದೊರೆಯುತ್ತವೆ. ಪಂಚಸಾರ ಕ್ಷೇತ್ರವೆಂದೂ ಸಹ ಹೆಸರು. 108 ದಿವ್ಯದೇಶಗಳಲ್ಲಿ ಕೆಲವು ಅತ್ಯಂತ ಪವಿತ್ರವಾದವುಗಳಲ್ಲಿ ಇದೂ ಒಂದು. ಇಲ್ಲಿ ಒಂದು ರಾಜಗೋಪಾಲನ ಸನ್ನಿಧಿಯೂ ಉಂಟು. ಇದಕ್ಕೆ ಒಂದು ಹಿನ್ನೆಲೆಯ ಕಥೆ ಇದೆ. ಈ ಪ್ರದೇಶದ ರಾಜನು, ಮನ್ನಾರ್ ಗುಡಿಯಲ್ಲಿ ರಾಜಗೋಪಾಲನ ಸನ್ನಿಧಿ ನಿರ್ಮಿಸಬೇಕೆಂದು ಅವನ ಮಂತ್ರಿಗೆ ಸೂಚನೆ ಕೊಟ್ಟ. ಆದರೆ ಮಂತ್ರಿಯ ಭಕ್ತಿಯು ಸಾರನಾಥನಲ್ಲಿತ್ತು. ಅದಕ್ಕಾಗಿ ಸಾರನಾಥ ಕ್ಷೇತ್ರದ ದುರಸ್ತಿಗಾಗಿ ಹೆಚ್ಚಿನ ಹಣ ವಿನಿಯೋಗಿಸಿದ. ಮಹಾರಾಜ ಇದ್ದಕ್ಕಿದ್ದಂತೆ ಪರೀಕ್ಷಿಸಲು ಬರುತ್ತಾನೆಂದು ತಿಳಿದಾಗ, ಒಂದು ರಾಜಗೋಪಾಲನ ಮೂರ್ತಿಯನ್ನು ಸಿದ್ಧಪಡಿಸಿ, ಅದನ್ನು ರಾಜನಿಗೆ ತೋರಿಸಿ ಅವನನ್ನು ತೃಪ್ತಿಗೊಳಿಸಿದನೆಂದೂ, ಆ ವಿಗ್ರಹ ಈಗಲೂ ಸಹ ಸಾರನಾಥ ದೇವಸ್ಥಾನದಲ್ಲಿ ಪ್ರತಿಷ್ಠಾಪಿತವಾಗಿದೆ.

ಈ ದೇಗುಲದಲ್ಲಿ ದೇವರು ಐದು ದೇವಿಯರ ಸಹಿತ ದರ್ಶನ ನೀಡುತ್ತಾರೆ. ಶ್ರೀದೇವಿ, ಭೂದೇವಿ, ನೀಲಾದೇವಿ, ಮಹಾಲಕ್ಷ್ಮಿ, ಸಾರನಾಯಕಿ.

ಪ್ರಳಯ ಕಾಲದಲ್ಲಿ ಈ ಕ್ಷೇತ್ರದ ಮಣ್ಣಿನಿಂದ ಮಡಿಕೆಯನ್ನು ಮಾಡಿ ಆ ಮಡಿಕೆಯಲ್ಲಿ ವೇದಗಳನ್ನಿರಿಸಿ ಕಾಪಾಡಿದರೆಂಬುದು ಕ್ಷೇತ್ರ ಪುರಾಣ.

ಮೂಲವರ್ : ಶ್ರೀ ಸಾರನಾಥನ್ (ನಿಂತಿರುವ ಭಂಗಿ)
ಉತ್ಸವರ್ : ಮಾಮದಲೈಪಿರಾಣ್
ತಾಯಾರ್ : ಸಾರನಾಯಕಿ, ಶ್ರೀದೇವಿ, ಭೂದೇವಿ, ನೀಲಾದೇವಿ, ಮಹಾಲಕ್ಷ್ಮಿ
ತೀರ್ಥಂ : ಸಾರ ಪುಷ್ಕರಣಿ
ವಿಮಾನಂ : ಸಾರ ವಿಮಾನಂ
ಪ್ರತ್ಯಕ್ಷಗೊಂಡಿರುವುದು : ಕಾವೇರಿ, ಮಾರ್ಕಂಡೇಯ

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್

# 16. ತಿರುಕ್ಕನ್ನಮಂಗ್ಯೈ

॥ ಓಂ ಶ್ರೀಅಭಿಷೇಕವಲ್ಲಿ ಸಮೇತ ಶ್ರೀಭಕ್ತವತ್ಸಲ ಸ್ವಾಮಿನೇ ನಮಃ ॥

ತಿರುವಾರೂರು ಎಂಬ ಊರಿನಿಂದ 8ಕಿ.ಮೀ. ದೂರದಲ್ಲಿದೆ. ತಿರುವಾರೂರಿನಿಂದ ಬಸ್ ಸಂಚಾರ ಚೆನ್ನಾಗಿದೆ. ಆಟೋರಿಕ್ಷಾ ಟ್ಯಾಕ್ಸಿಗಳೂ ಸಹ ದೊರೆಯುತ್ತವೆ. ತಿರುವಾರೂರು, ದೊಡ್ಡ ಊರಾಗಿದ್ದು ಎಲ್ಲಾ ಅನುಕೂಲಗಳೂ ಇವೆ. ತಿರುವಾರೂರು ತಂಜಾವೂರು ಸಮೀಪದಲ್ಲಿದೆ.

ಮಹಾಲಕ್ಷ್ಮಿಯು ಈ ಕ್ಷೇತ್ರದಲ್ಲಿ ತಪಸ್ಸುಮಾಡಿ ಶ್ರೀಮಹಾವಿಷ್ಣುವನ್ನು ಮದುವೆ ಆದುದಾಗಿಯೂ, ವಿವಾಹಕ್ಕೆ ಮುನ್ನ ತೀರ್ಥದಲ್ಲಿ ಸ್ನಾನ ಮಾಡಿ ನಂತರ ವಿವಾಹ ನಡೆದುದಾಗಿಯೂ, ಆದ್ದರಿಂದಲೇ ಮಹಾಲಕ್ಷ್ಮಿಗೆ 'ಅಭಿಷೇಕವಲ್ಲಿ' ಎಂದು ಹೆಸರು. ವಿವಾಹಕ್ಕೆ ಬಂದಿದ್ದ ದೇವತೆಯರೆಲ್ಲರೂ ಇಲ್ಲಿಯೇ ಇರುವುದಾಗಿ ಸಂಕಲ್ಪಿಸಿ, ಜೇನು ನೊಣಗಳ ರೂಪದಲ್ಲಿ ಈಗಲೂ ಇರುವುದಾಗಿ ಸ್ಥಳ ಪುರಾಣ ಉಂಟು. ಅಮ್ಮನವರ ಸನ್ನಿಧಿಯಲ್ಲಿ ಎರಡು ಜೇನಿನ ಗೂಡುಗಳಿದ್ದು, ಇವಕ್ಕೂ ಸಹ ಪೂಜೆ ಸಲ್ಲಿಸುತ್ತಾರೆ. ದಕ್ಷಿಣಾಯನ ಹಾಗೂ ಉತ್ತರಾಯಣದಲ್ಲಿ ಜೇನು ಹುಳುಗಳು ತಮ್ಮ ಗೂಡುಗಳನ್ನು ಬದಲಿಸುತ್ತವೆ. ಈ ಕ್ಷೇತ್ರಕ್ಕೆ ಸಪ್ತಾಮೃತ ಕ್ಷೇತ್ರವೆಂದೂ ಹೆಸರು. ಆಗಮ ಶಾಸ್ತ್ರ ರೀತ್ಯಾ ದೇವಸ್ಥಾನದಲ್ಲಿ ಇರಬೇಕಾದ ಎಲ್ಲಾ ಅಂಶಗಳೂ ಇಲ್ಲಿವೆ.

ದೇವಸ್ಥಾನದ ಹೊರ ಪ್ರಕಾರದಲ್ಲಿರುವ ಗರುಡದೇವರು ಅಂಜಲೀಹಸ್ತನಾಗಿದ್ದು ಭಕ್ತರ ಪ್ರಾರ್ಥನೆಗಳನ್ನು ಈಡೇರಿಸುವುದಾಗಿ ಪ್ರತೀತಿ. ದೇವಾಲಯವು ಸುಂದರ ಶಿಲ್ಪಕಲೆಯನ್ನು ಹೊಂದಿದೆ.

ಈ ದೇಗುಲದಲ್ಲಿ ಯಾವುದೇ ರೀತಿಯ ಮಂತ್ರಜಪ ಮಾಡದಿದ್ದರೂ ಕ್ಷೇತ್ರದಲ್ಲಿ ಒಂದು ದಿನ ವಾಸ ಮಾಡಿದರೆ ಮೋಕ್ಷವು ಲಭಿಸುವುದೆಂದು ನಂಬಿಕೆಯಿದೆ.

**ಮೂಲವರ್ :** **ಶ್ರೀ ಭಕ್ತವತ್ಸಲ ಪೆರುಮಾಳ್, ಪತ್ರಾವಿ ಪೆರುಮಾಳ್**
**(ನಿಂತಿರುವ ಭಂಗಿ)**

**ಉತ್ಸವರ್ :** **ಪೆರುಂಪುರಕಡಲ್**

ತಾಯಾರ್ : ಅಭಿಷೇಕವಲ್ಲಿ

ತೀರ್ಥಂ : ದರ್ಶನ ಪುಷ್ಕರಣಿ

ವಿಮಾನಂ : ಉತ್ಪಲ ವಿಮಾನಂ

ಪ್ರತ್ಯಕ್ಷಗೊಂಡಿರುವುದು : ವರುಣ, ರೋಮಸಮುನಿ, 33 ಕೋಟಿ ದೇವರು

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್



# 17. ತಿರುಕ್ಕನ್ನಪುರಂ

॥ ಓಂ ಶ್ರೀಕಣ್ಣಪುರನಾಯಕಿ ಸಮೇತ ಶ್ರೀಶೌರಿರಾಜ ಸ್ವಾಮಿನೇ ನಮಃ ॥

ಮಾಯಾವರಂ ಮತ್ತು ತಿರುವಾರೂರು ನಡುವೆ ಇರುವ ನನ್ನಿಲಂ ಎಂಬ ಊರಿನಿಂದ 8 ಕಿ.ಮೀ. ದೂರದಲ್ಲಿರುವ ಸಣ್ಣ ಊರು. ನನ್ನಿಲಂ ಇಂದ ನಾಗೋರ್‌ಗೆ ಹೋಗುವ ಬಸ್ಸಿನಲ್ಲಿ ತಿರುಪ್ಪುಗಲೂರ್ ಎಂಬ ಸ್ಥಳದಲ್ಲಿ ಇಳಿದು 2 ಕಿ.ಮೀ. ಒಳಕ್ಕೆ ಹೋದರೆ ತಿರುಕ್ಕಣ್ಣಪುರಂ ಸಿಕ್ಕುತ್ತದೆ. ವಸತಿ ಅಥವಾ ಇತರ ಸೌಲಭ್ಯಗಳಿಲ್ಲ.

ಈ ಕ್ಷೇತ್ರದ ಬಗ್ಗೆ ಒಂದು ಕಥೆ ಪ್ರಚಾರದಲ್ಲಿದೆ. ಈ ದೇಗುಲಕ್ಕೆ ಆ ಊರಿನ ರಾಜನು ಬರುವೆನೆಂದು ತಿಳಿಸಿ ತುಂಬಾ ಹೊತ್ತಾದರೂ ಬರದಿದ್ದಾಗ ಅರ್ಚಕರು ದೇಗುಲದ ಬಾಗಿಲು ಹಾಕಿಕೊಂಡು ತಮ್ಮ ಪ್ರೀತಿಯ ಹೆಂಡತಿಯ ಮನೆಗೆ ಹೋದರು. ಅಲ್ಲಿ ರಾಜನಿಗೆ ಹಾಕಬೇಕೆಂದಿದ್ದ ಹೂ ಮಾಲೆಯನ್ನು ಪ್ರೇಯಸಿಗೆ ಹಾಕಿ ಸರಸ ಸಲ್ಲಾಪದಲ್ಲಿದ್ದರು. ಅದೇ ಸಮಯಕ್ಕೆ ರಾಜನು ದೇಗುಲಕ್ಕೆ ಆಗಮಿಸಿದ. ವಿಷಯ ಅರಿತ ಅರ್ಚಕರು ಗಡಿಬಿಡಿಯಿಂದ ಪ್ರೇಯಸಿಯ ಕುತ್ತಿಗೆಯಲ್ಲಿದ್ದ ಹೂವಿನ ಹಾರವನ್ನು ತೆಗೆದುಕೊಂಡು ಬಂದು ದೇಗುಲದಲ್ಲಿ ದರ್ಶನಾಕಾಂಕ್ಷಿಯಾಗಿ ಬಂದಿದ್ದ ರಾಜನಿಗೆ ಹಾಕಿ ಗೌರವ ಸೂಚಿಸಿದ. ರಾಜನು ದೇವರ ದರ್ಶನ ಮಾಡಿ ಅರಮನೆಗೆ ಹಿಂತಿರುಗಿದ. ಮಂತ್ರಿಯು ರಾಜನ ಹೂವಿನ ಹಾರದಲ್ಲಿ ಒಂದು ಕೂದಲಿರುವುದನ್ನು ವೀಕ್ಷಿಸಿ ರಾಜನಿಗೆ ತಿಳಿಸಿದ. ರಾಜನು ಕೋಪಗೊಂಡು ಅರ್ಚಕನನ್ನು ಕರೆಸಿ ವಿಚಾರಿಸಿದಾಗ ಅರ್ಚಕನು ನನಗೇನೂ ತಿಳಿಯದೆಂದು ಹೇಳಿದನು. ಆಗ ರಾಜನು ನಾನು ನಾಳೆ ಬೆಳಗ್ಗೆ ಮತ್ತೆ ದೇಗುಲಕ್ಕೆ ಬಂದು ವೀಕ್ಷಿಸಿ ನಂತರ ನಿನಗೆ ದಂಡನೆಯನ್ನು ಕೊಡುವೆನೆಂದು ತಿಳಿಸಿದನು. ಆ ರಾತ್ರಿ ಅರ್ಚಕನು ದೇವರಲ್ಲಿ ತನ್ನ ತಪ್ಪಾಯಿತೆಂದು ಮೊರೆಯಿಟ್ಟು ತನ್ನನ್ನು ಕಾಪಾಡಬೇಕೆಂದು ಪ್ರಾರ್ಥಿಸಿದ. ಮಾರನೇ ದಿನ ರಾಜನು ದೇಗುಲಕ್ಕೆ ಬಂದು ನೋಡಿದಾಗ ಉತ್ಸವ ಮೂರ್ತಿ ತಲೆಯಲ್ಲಿ ಕೂದಲು ಬೆಳೆದಿರುವುದು ಕಂಡು ಬಂದಿತು. ರಾಜನು ಅದನ್ನು ಕಂಡು ಅರ್ಚಕನಿಗೆ ಶಿಕ್ಷೆ ಕೊಡಬೇಕೆಂದು ಸಂಕಲ್ಪ ಮಾಡಿದ್ದೇ ತಪ್ಪಾಯಿತೆಂದು ತಿಳಿದು ಭಗವಂತನಿಗೆ ನಮಸ್ಕರಿಸಿ ಅರಮನೆಗೆ ತೆರಳಿದ.

ಅರ್ಚಕರು ದೇವರ ಬಳಿ ಬಂದು "ಹೇ ಭಗವಂತಾ, ನನ್ನ ಮೊರೆಯನ್ನು ಆಲಿಸಿ ನಿನ್ನ ತಲೆಯಿಂದ ಕೂದಲನ್ನು ಬೆಳೆಸಿಕೊಂಡು ನನ್ನನ್ನು ರಕ್ಷಿಸಿದ್ದೀಯೆ. ನಿನಗೆ ಕೋಟಿಕೋಟಿ ವಂದನೆಗಳು. ಇಂದಿನಿಂದ ನೀನು (ಕೂದಲು) ಶೌರಿ ರಾಜನ್ ಎಂದು ಹೆಸರುವಾಸಿಯಾಗು ಎಂದು ಬಿನ್ನವಿಸಿದನು. ಈಗಲೂ ಸಹ ಉತ್ಸವ ಮೂರ್ತಿಯ ಹಿಂಭಾಗದಲ್ಲಿ ಕೂದಲಿನ ಚೌರಿ ಇದೆ. (ಅರ್ಚಕರನ್ನು ಕೇಳಿಕೊಂಡಲ್ಲಿ ಚೌರಿಯನ್ನು ತೋರಿಸುತ್ತಾರೆ). ದೇವರ ಮೆರವಣಿಗೆ ಮಾಡುವ ಸಮಯದಲ್ಲಿ ತಲೆಯ ಹಿಂಭಾಗದಲ್ಲಿರುವ ಜಡೆಯನ್ನು ನೋಡಬಹುದು.

ಭಕ್ತರೊಬ್ಬರ ಶ್ರೀಮತಿ ಮಾಡಿದ ಪೊಂಗಲ್ ಅನ್ನು ಅರ್ಧರಾತ್ರಿಯಾದರೂ ನೈವೇದ್ಯ ಮಾಡಲಾಗದೆ ಮಾನಸಿಕವಾಗಿ ನೈವೇದ್ಯ ಮಾಡಿದರು. ದೇಗುಲ ಮುಚ್ಚಿರುವಾಗ ಗಂಟೆಯ ಶಬ್ದ ಕೇಳಿ ಪೊಂಗಲ್‌ನ ತುಪ್ಪದ ವಾಸನೆ ಬಂದಿತು. ಅಂದಿನಿಂದ ಇಂದಿನವರೆಗೂ ಅರ್ಧರಾತ್ರಿಯಲ್ಲಿ ದೇವರಿಗೆ ಪ್ರಸಾದ ನೈವೇದ್ಯ ಮಾಡಲಾಗುತ್ತದೆ. ಈ ಪ್ರಸಾದದ ಹೆಸರು ಮುನಿಯೋದರ ಪೊಂಗಲ್. ಇಂದಿಗೂ ಬೆಣ್ಣೆಯನ್ನು ಕಾಯಿಸಿ ತುಪ್ಪವನ್ನು ಮಾಡಿ ಆ ತುಪ್ಪದಿಂದ ಪೊಂಗಲ್ ಮಾಡುತ್ತಾರೆ.

ಈ ಸನ್ನಿಧಿಯ ದೇವರ ನಾಲ್ಕು ಜನ ದೇವಿಯರಲ್ಲಿ ಒಬ್ಬಳು ಮೀನುಗಾರ್ತಿ. ಈಗಲೂ ಸಹ ವರ್ಷದಲ್ಲಿ ಒಂದು ದಿನ ಈ ಜನಾಂಗದ ಜನರ ಸೇವೆ ಉಂಟು.

ಈ ಕ್ಷೇತ್ರದಲ್ಲಿ ತಿರುಮಂಗೈ ಆಳ್ವಾರಿಗೆ ಅಷ್ಟಾಕ್ಷರ ಮಂತ್ರೋಪದೇಶವಾಯಿತು.

ಮೂಲವರ್ : ನೀಲಮೇಘ ಪೆರುಮಾಳ್

ಉತ್ಸವರ್ : ಶೌರಿರಾಜನ್

ತಾಯಾರ್ : ಕಣ್ಣಪುರ ನಾಯಕಿ(ಶ್ರೀದೇವಿ, ಭೂದೇವಿ, ಆಂಡಾಳ್, ಪದ್ಮಿನಿ)

ತೀರ್ಥಂ : ನಿತ್ಯ ಪುಷ್ಕರಣಿ

ವಿಮಾನಂ : ಉತ್ಪಲವದಗ

ಪ್ರತ್ಯಕ್ಷಗೊಂಡಿರುವುದು : ಕಣ್ವ ಮುನಿ, ಗರುಡ, ದಂಡಕ ಮಹರ್ಷಿ

ಮಂಗಳಶಾಸನ ಮಾಡಿರುವವರು :

1. ಪೆರಿಯಾಳ್ವಾರ್, 2. ಆಂಡಾಳ್, 3. ಕುಲಶೇಖರ ಆಳ್ವಾರ್, 4. ತಿರುಮಂಗೈ ಆಳ್ವಾರ್ 5. ನಮ್ಮಾಳ್ವಾರ್

# 18. ತಿರುಕನ್ನಂಗುಡಿ

॥ ಓಂ ಶ್ರೀಅರವಿಂದವಲ್ಲಿ ಸಮೇತ ಶ್ರೀಶ್ಯಾಮಲಮೇಣಿ ಸ್ವಾಮಿನೇ ನಮಃ ॥

ತಂಜಾವೂರಿನಿಂದ ನಾಗೋರ್ ಅಥವಾ ನಾಗಪಟ್ಟಣಕ್ಕೆ ಹೋಗುವ ಮಾರ್ಗದಲ್ಲಿ ಕೀಳ್‌ವೇಲೂರ್‌ನಲ್ಲಿ ರೈಲ್ವೆ ಸ್ಟೇಷನ್ ಸಹ ಇದೆ. ಸಣ್ಣ ಊರು, ಯಾವ ಸೌಕರ್ಯಗಳೂ ಹೆಚ್ಚಾಗಿಲ್ಲ(ಕೀಳ್‌ವೇಲೂರ್‌ನಿಂದ ಆಟೋದಲ್ಲಿ ಹೋಗಿಬರಬಹುದು)

ಈ ಕ್ಷೇತ್ರದಲ್ಲಿ ಪ್ರತಿವರ್ಷ ನಡೆಯುವ ಬ್ರಹ್ಮೋತ್ಸವದಲ್ಲಿ 7ನೇ ದಿನ, ದೇವರಿಗೆ ಸ್ವಲ್ಪ ಹೊತ್ತು ವಿಭೂತಿಯನ್ನು ಹಚ್ಚುವುದು ವಾಡಿಕೆ. ಶಿವ ಹಾಗೂ ವಿಷ್ಣುವಿಗೆ ಭೇದವಿಲ್ಲವೆಂಬುದನ್ನು ತೋರಿಸಲು ಈ ರೀತಿಯ ಉತ್ಸವ ನಡೆಯುವುದೆಂದು ಹೇಳುತ್ತಾರೆ. ಈ ದೇವರು ವರಪ್ರಸಾದಿ ಎಂದು ಪ್ರಸಿದ್ಧಿ.

ಒಮ್ಮೆ ವಸಿಷ್ಟ ಮಹರ್ಷಿಯು ಬೆಣ್ಣೆಯಿಂದ ಶ್ರೀ ಕೃಷ್ಣನ ವಿಗ್ರಹ ಮಾಡಿ ಪೂಜಿಸುತ್ತಿರುವರು. ಆಗ ಕೃಷ್ಣನು ಅಲ್ಲಿಂದ ಓಡಿ ಹೋಗುವಾಗ ವಸಿಷ್ಠ ಮಹರ್ಷಿಯೂ ಓಡಿ ಓಡಿ ಸಾಧ್ಯವಾಗದೆ ಪ್ರೀತಿಯ ಮಂತ್ರಗಳಿಂದ ಕೃಷ್ಣನನ್ನು ಬಂಧಿಸಿದನು. ಆದ್ದರಿಂದ ಈ ಊರಿಗೆ ತಿರುಕನ್ನಂಗುಡಿ ಎಂಬ ಹೆಸರು ಬಂದಿತು.

ಈ ಸನ್ನಿಧಿಯಲ್ಲಿ ಮೂಲವರ್ ಮತ್ತು ಉತ್ಸವರ್ ಎರಡೂ ಮೂರ್ತಿಗಳು ಒಂದೇ ರೀತಿ ಇರುತ್ತದೆ. ಈ ರೀತಿ 108 ದಿವ್ಯ ದೇಶಗಳಲ್ಲಿ ಎಲ್ಲೂ ಕಂಡುಬರುವುದಿಲ್ಲ.

ಮೂಲವರ್ : ಲೋಕನಾಥನ್, ಶ್ಯಾಮಲಮೇಣಿ ಪೆರುಮಾಳ್

ಉತ್ಸವರ್ : ದಾಮೋದರ ನಾರಾಯಣನ್, ಶ್ರೀದೇವಿ, ಭೂದೇವಿ

ತಾಯಾರ್ : ಲೋಕನಾಯಕಿ

ತೀರ್ಥಂ : ಶ್ರಾವಣ ಪುಷ್ಕರಣಿ (ಈ ಪುಷ್ಕರಣಿಯ ಹೆಸರು ಕೇಳಿದ ತಕ್ಷಣ ಸಕಲ ಪಾಪ ಪರಿಹಾರವಾಗುವುದು)

ಸ್ಥಳ ವೃಕ್ಷಂ : ವಗುಳ ಮರ

ವಿಮಾನಂ : ಉದ್ಬಲವಗಾಗ

ಪ್ರತ್ಯಕ್ಷಗೊಂಡಿರುವುದು : ಬೃಗು, ಬ್ರಹ್ಮ, ಉಪರಿಶರವಸು, ಗೌತಮ, ತಿರುಮಂಗೈ ಆಳ್ವಾರ್

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್

# 19. ತಿರುನಾಗೈ

**॥ ಓಂ ಶ್ರೀಸೌಂದರ್ಯವಲ್ಲಿ ಸಮೇತ ಶ್ರೀಸೌಂದರ್ಯರಾಜ ಸ್ವಾಮಿನೇ ನಮಃ ॥**

ನಾಗಪಟ್ಟಣ ರೈಲ್ವೆ ನಿಲ್ದಾಣದಿಂದ ಒಂದು ಮೈಲಿ ದೂರದಲ್ಲಿ 'ತಿರುನಾಗೈ' ಇದೆ. ದೊಡ್ಡ ಪಟ್ಟಣ. ಆದ್ದರಿಂದ ಎಲ್ಲ ಸೌಕರ್ಯಗಳೂ ಇವೆ. ಪುರಾಣಗಳಲ್ಲಿ ಇದನ್ನು ಸೌಂದರ್ಯಾರಣ್ಯ ಕ್ಷೇತವೆಂದು ಕರೆಯಲಾಗಿದೆ.

ಇಲ್ಲಿ ಮೂಲ ಸನ್ನಿಧಿಗಳೇ ಮೂರು ಇವೆ. ಒಂದು ಶಯನ ಭಂಗಿಯಲ್ಲಿನ ರಂಗನಾಥ, ಇನ್ನೊಂದು ಕುಳಿತಿರುವ ಭಂಗಿಯಲ್ಲಿನ ಗೋವಿಂದರಾಜ, ನಿಂತಿರುವ ಮೂರ್ತಿಯು ಸೌಂದರ್ಯ ರಾಜ. ಗರ್ಭಗುಡಿಯ ಮೇಲಿನ ವಿಮಾನವು ಐದು ಕಳಶಗಳನ್ನು ಒಳಗೊಂಡಿದ್ದು, ವೈಶಿಷ್ಟ್ಯ ಪೂರ್ಣವಾಗಿದೆ. ಇಲ್ಲಿ ವಿಷ್ಣುವು ಗರುಡಾರೂಢನಾಗಿ ಧ್ರುವನಿಗೆ ದರ್ಶನ ನೀಡದನೆಂಬ ಪ್ರತೀತಿ. ಗಜಲಕ್ಷ್ಮಿ ಇಲ್ಲಿನ ಉತ್ಸವದ ದೇವಿಯಾಗಿದ್ದಾಳೆ. ಇಲ್ಲಿ ಅಷ್ಟಭುಜ ನರಸಿಂಹನಿದ್ದಾನೆ. ದುಷ್ಟ ಶಿಕ್ಷಣ, ಶಿಷ್ಟಪರಿಪಾಲನೆ ಮಾಡುತ್ತಿದ್ದಾನೆ ಎಂಬ ನಂಬಿಕೆ. ಅರ್ಚಕರು ರಾಗಮಾಲಿಕೆಯಲ್ಲಿ ಅರ್ಚನೆಯನ್ನು ಮಾಡುವುದು ಇಲ್ಲಿನ ಒಂದು ವೈಶಿಷ್ಟ್ಯ. ಈ ದೇವಾಲಯಕ್ಕೆ ಒಟ್ಟು 15 ಗೋಪುರಗಳಿವೆ. ರಾಜಗೋಪುರ ಎಲ್ಲದಕ್ಕಿಂತ ಎತ್ತರ. ರಂಗನಾಥ, ಶ್ರೀರಾಮ, ಆಂಡಾಳ್, ಆಳ್ವಾರರುಗಳಿಗೆ ಪ್ರತ್ಯೇಕ ಸನ್ನಿಧಿಗಳಿವೆ.

ಈ ದೇವರು ತುಂಬಾ ಸೌಂದರ್ಯವಂತನಾಗಿದ್ದಾನೆ. ಇವನನ್ನು ದರ್ಶಿಸಿದರೆ ಅಷ್ಟೈಶ್ವರ್ಯಗಳೂ ದೊರಕುತ್ತದೆ.

**ಮೂಲವರ್ : ಶ್ರೀ ನೀಲಮೇಘ ಪೆರುಮಾಳ್**

**ಉತ್ಸವರ್ : ಸೌಂದರ್ಯ ರಾಜ**

**ತಾಯಾರ್ : ಸೌಂದರ್ಯವಲ್ಲಿ, ಗಜಲಕ್ಷ್ಮಿ**

**ತೀರ್ಥಂ : ಸಾರಪುಷ್ಕರಣಿ**

**ವಿಮಾನಂ : ಸೌಂದರ್ಯ ವಿಮಾನಂ**

**ಪ್ರತ್ಯಕ್ಷಗೊಂಡಿರುವುದು : ನಾಗರಾಜ (ಆದಿಶೇಷ), ತಿರುಮಂಗೈ ಆಳ್ವಾರ್, ಧೃವ**

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್

# 20. ತಿರುತ್ತಂಜೈ ಮಾಮಣಿ ಕೋಯಿಲ್

॥ ಓಂ ಶ್ರೀಸೆಂಗಮಲವಲ್ಲಿ ಸಮೇತ ಶ್ರೀನೀಲಮೇಘ ಸ್ವಾಮಿನೇ ನಮಃ ॥

ಈ ಸನ್ನಿಧಿಯು ತಂಜಾವೂರ್ ರೈಲ್ವೇ ಸ್ಟೇಷನ್ನಿನಿಂದ 3 ಕಿ.ಮೀ. ದೂರದಲ್ಲಿದೆ. ತಂಜಾವೂರ್ ಸಿಟಿಯ ಒಂದು ಭಾಗವಾಗಿದೆ. ತಂಜಾವೂರ್ ಮದ್ರಾಸ್ ತಿರುಚ್ಚಿಮಾರ್ಗ ಮಧ್ಯದಲ್ಲಿರುವ ಪ್ರಸಿದ್ಧ ನಗರ. ಎಲ್ಲಾ ವಿಧವಾದ ಅನುಕೂಲಗಳು ಇವೆ. ಇಲ್ಲಿ ಮೂರು ಸನ್ನಿಧಿಗಳುಂಟು.

ತಂಜಗಾಸುರನೆಂಬ ರಾಕ್ಷಸನು ಈ ಪ್ರದೇಶವನ್ನು ಆಳುತ್ತಿದ್ದನು. ಅವನು ಇಂದ್ರಾದಿ ದೇವ ಲೋಕಗಳನ್ನೆಲ್ಲಾ ಧ್ವಂಸ ಮಾಡುತ್ತಿದ್ದನು. ಆಗ ಶ್ರೀಮನ್ನಾರಾಯಣನು ಈ ರಾಕ್ಷಸನ ಸಂಹಾರ ಮಾಡಿದನು. ಸಂಹಾರ ಮಾಡುವ ಸಂದರ್ಭದಲ್ಲಿ ಅಸುರ ನಾರಾಯಣನನ್ನು ಈ ಊರಿಗೆ ನನ್ನ ಹೆಸರೇ ಇಡಬೇಕೆಂದು ಬೇಡಿಕೊಂಡನು. ಆಗ ನಾರಾಯಣನು ತಥಾಸ್ತು ಎಂದು ಹೇಳಿ ತಂಜಗಾ ಊರು ಎಂದು ಹೇಳಿದನು. ತಂಜಗಾ ಊರು ಇಂದು ತಂಜಾವೂರು ಎಂದಾಗಿದೆ.

**1) ತಂಜಿ ಮಾಮಣಿ ಕೋಯಿಲ್:-**

**ಮೂಲ ದೇವರ ಹೆಸರು– ನೀಲಮೇಘ ಪೆರುಮಾಳ್**

**ಅಮ್ಮನವರ ಹೆಸರು – ಸೆಂಗಮಲವಲ್ಲಿ ತಾಯಾರ್**

**ತೀರ್ಥ – ಅಮೃತ ತೀರ್ಥ**

**ವಿಮಾನ – ಸೌಂದರ್ಯ ವಿಮಾನ**

ಮೂರ್ತಿಯು ಪೂರ್ವಭಿಮುಖವಾಗಿ ಕುಳಿತಿರುವ ಭಂಗಿಯಲ್ಲಿದೆ. ಪರಾಶರ ಮುನಿಗಳಿಗೆ ಪ್ರತ್ಯಕ್ಷರಾಗಿದ್ದರೆಂದು ಪ್ರತೀತಿ.

**2) ತಂಜೈಯಾಲಿ ನಗರ್ :-**

ಮೂಲ ದೇವರ ಹೆಸರು – ನರಸಿಂಹಸ್ವಾಮಿ(ಬೃಹತ್ ಮೂರ್ತಿ)

ಅಮ್ಮನವರ ಹೆಸರು – ತಂಜೈ ನಾಯಕಿ

ತೀರ್ಥಂ – ಸೂರ್ಯ ಪುಷ್ಕರಣಿ, ಶ್ರೀ ರಾಮತೀರ್ಥಂ

ವಿಮಾನಂ – ವೇದ ಸುಂದರ

ಪ್ರತ್ಯಕ್ಷವಾಗಿರುವುದು – ಮಾರ್ಕಂಡೇಯ

3) ಮಣಿಕ್ಕುಂಡ್ರ ಪೆರುಮಾಳ್ ಕೋಯಿಲ್–

(ಇದು ಮೊದಲನೆಯ ಸನ್ನಿಧಿಯ ಸಮೀಪದಲ್ಲೇ ಇದೆ.)

ಮೂಲ ದೇವರ ಹೆಸರು – ಮಣಿಕೂರ್ಣಪೆರುಮಾಳ್

ಅಮ್ಮನವರ ಹೆಸರು – ಅಂಬುಜವಲ್ಲಿ ತಾಯಾರ್

ತೀರ್ಥಂ – ಶ್ರೀರಾಮ ತೀರ್ಥಂ

ವಿಮಾನ – ಮಣಿಕ್ಕೂಡ ವಿಮಾನ

ಪ್ರತ್ಯಕ್ಷವಾಗಿರುವುದು – ಮಾರ್ಕಂಡೇಯ

ಪೂರ್ವಾಭಿಮುಖವಾಗಿ ಕುಳಿತಿರುವ ಭಂಗಿ, ಮಾರ್ಕಂಡೇಯರಿಗೆ ಪ್ರತ್ಯಕ್ಷ.

ಈ ಮೇಲೆ ತಿಳಿಸಿರುವ ಮೂರು ಸನ್ನಿಧಿಗಳಲ್ಲೂ ಉತ್ಸವ ಮೂರ್ತಿಯ ಹೆಸರು ಶ್ರೀಮನ್ನಾರಾಯಣನೆಂದೇ ಇದೆ.

ಇಲ್ಲಿಯೇ ಆಚಾರ್ಯ ದೇಶಿಕರ ಪುತ್ರರಾದ ಶ್ರೀ ನಯಿನಾಚಾರ್ಯರು, ದಿವ್ಯ ಪ್ರಬಂಧಗಳ ಅಧ್ಯಯನ ಕಾಲದಲ್ಲಿ 'ಶ್ರೀ ದೇಶಿಕ ಪ್ರಬಂಧ' ವನ್ನು ಪಠನ ಮಾಡುವ ಕ್ರಮವನ್ನು ಜಾರಿಗೆ ತಂದರು. ಈ ದೇಶಿಕ ಪ್ರಬಂಧವನ್ನು ಎಲ್ಲಾ 108 ದಿವ್ಯ ದೇಶಗಳಲ್ಲೂ ವಾಚನ ಮಾಡಬೇಕೆಂಬುದು ನಿಯಮ.

ಆಳ್ವಾರ್ ಹಾಡುಗಳು:–

1. ತಿರುಮಂಗೈ ಆಳ್ವಾರ್ 2. ಭೂತತ್ತಾಳ್ವಾರ್, ನಮ್ಮಾಳ್ವಾರ್

ತಂಜಾವೂರ್‌ನಲ್ಲಿರುವ ಇತರ ಸನಿಧಿಗಳ ಬಗ್ಗೆ ಅಭಿಮಾನ ಕ್ಷೇತ್ರಗಳ ವಿವರಣೆಗಳಲ್ಲಿ ಹೇಳಲಾಗಿದೆ.

ಈ ಮೂರೂ ದೇಗುಲಗಳು ಸೇರಿ ಒಂದೇ ದಿವ್ಯದೇಶವಾಗುತ್ತದೆ.

# 21. ತಿರುನಂದಿಪುರ ವಿನ್ನಗರಂ

॥ ಓಂ ಶ್ರೀಸೆಂಬಕವಲ್ಲಿ ಸಮೇತ ಶ್ರೀಜಗನ್ನಾಥ ಸ್ವಾಮಿನೇ ನಮಃ ॥

ಕುಂಭಕೋಣದಿಂದ 8 ಕಿ.ಮೀ. ದೂರದಲ್ಲಿದೆ. ಬಸ್ಸುಗಳು ವಿರಳವಾಗಿ ಓಡಾಡುತ್ತವೆ. ಆಟೋರಿಕ್ಷಾದಲ್ಲಿ ಹೋಗಿ ಬರಬಹುದು ಸಣ್ಣ ಊರು.

ಇದು ದಕ್ಷಿಣ ಜಗನ್ನಾಥ ದೇವಸ್ಥಾನ. ದೇವರ ಹೆಸರು ಜಗನ್ನಾಥನ್.

ಒಮ್ಮೆ ನಂದಿಯು ಶ್ರೀಮನ್ನಾರಾಯಣನ ದರ್ಶನಾರ್ಥಿಯಾಗಿ ವೈಕುಂಠಕ್ಕೆ ಬಂದಿತು. ಆಗ ದ್ವಾರಪಾಲಕರು ನಂದಿಯನ್ನು ಒಳಬಿಡಲಿಲ್ಲ. ಕುಪಿತಗೊಂಡ ನಂದಿಯು ದ್ವಾರಪಾಲಕರನ್ನು ನಿಂದಿಸಿತು. ದ್ವಾರಪಾಲಕರು ನಂದಿಗೆ 'ನೀನು ಇಲ್ಲಿ ತುಂಬಾ ಗಲಾಟೆ ಮಾಡಿದ ಕಾರಣ ನಿನ್ನ ಮೈ ಎಲ್ಲಾ ಉಷ್ಣದಿಂದ ಉರಿಯಲಿ' ಎಂದು ಶಾಪವಿತ್ತರು. ಆಗ ನಂದಿಯು ಪಶ್ಚಾತಾಪದಿಂದ ಶಿವನ ಬಳಿ ಬಂದು ಸಮಾಚಾರ ತಿಳಿಸಿ ತನ್ನನ್ನು ತಂಪು ಮಾಡಬೇಕೆಂದು ಕೋರಿದಾಗ ಶಿವನು ದ್ವಾರಪಾಲಕರು ಕೊಟ್ಟ ಶಾಪ ಶ್ರೀಮನ್ನಾರಾಯಣನೇ ಕೊಟ್ಟ ಶಾಪದ ರೀತಿ. ಭೂಲೋಕದಲ್ಲಿ ಮಹಾಲಕ್ಷ್ಮಿಯು ಶ್ರೀಮನ್ನಾರಾಯಣನನ್ನು ಕುರಿತು ತಪಸ್ಸು ಮಾಡುತ್ತಿದ್ದಾಳೆ. ಆ ಸ್ಥಳಕ್ಕೆ ಹೋಗಿ ಅವರನ್ನು ಬೇಡಿಕೋ ನಿನ್ನ ಉರಿ ಕಡಿಮೆಯಾಗುತ್ತದೆ' ಎಂದನು. ನಂದಿಯು ಭೂಲೋಕದಲ್ಲಿ ಮಹಾಲಕ್ಷ್ಮಿ ತಪಸ್ಸು ಮಾಡುತ್ತಿದ್ದ ಸ್ಥಳಕ್ಕೆ ಬಂದು ತನ್ನ ಕಷ್ಟ ಪರಿಹಾರ ಮಾಡಲು ಬಿನ್ನವಿಸಿದನು. ಆಗ ಆತನ ಮೈಯಲ್ಲಿರುವ ಉರಿ ಕಡಿಮೆಯಾಯಿತು. ಈ ಸ್ಥಳದಲ್ಲಿ ನಂದಿಯು ಪೂಜೆ ಮಾಡಿ ತನ್ನ ಶಾಪ ವಿಮೋಚನೆ ಆದ ಕಾರಣದಿಂದ ಈ ಊರಿಗೆ ತಿರುನಂದಿಪುರ ವಿಣ್ಣಹರಂ ಎಂದಾಯಿತು.

ಈ ದೇವರು ಶಿಬಿ ಚಕ್ರವರ್ತಿ ಪಾರಿವಾಳವನ್ನು ಕಾಪಾಡಲು ತನ್ನ ಮೈಯನ್ನು ದಾನ ಮಾಡಲು ಮುಂದಾಗುವ ಸಂದರ್ಭವನ್ನು ವೀಕ್ಷಿಸಲು ಪೂರ್ವಾಭಿಮುಖವಾಗಿ ಕುಳಿತಿರುವನು.

**ಮೂಲವರ್ : ಶ್ರೀ ಜಗನ್ನಾಥನ್, ನಾದನಾಥನ್**
**ತಾಯಾರ್ : ಸೆಂಬಕವಲ್ಲಿ**
**ತೀರ್ಥಂ : ನಂದಿ ತೀರ್ಥ ಪುಷ್ಕರಣಿ**
**ವಿಮಾನಂ : ಮಂದಾರ**
**ಪ್ರತ್ಯಕ್ಷಗೊಂಡಿರುವುದು : ನಂದಿ, ಶಿಬಿ ಚಕ್ರವರ್ತಿ, ಮಾರ್ಕಂಡೇಯ**

**ಮಂಗಳಶಾಸನ ಮಾಡಿರುವವರು : 1. ತಿರುಮಂಗೈಆಳ್ವಾರ್**

# 22. ತಿರುವೆಳ್ಳಿಯಂಗುಡಿ

॥ ಓಂ ಶ್ರೀಮರಗದವಲ್ಲಿ ಸಮೇತ ಶ್ರೀಕೋಲವಿಲ್ಲಿರಾಮ ಸ್ವಾಮಿನೇ ನಮಃ ॥

ಕುಂಭಕೋಣ ಮತ್ತು ಮಾಯಾವರಂ ನಡುವೆ ಇರುವ ತಿರುವಿಡಮರುದೂರ್ ಎಂಬ ಊರಿನಿಂದ 8ಕಿ.ಮಿ. ದೂರದಲ್ಲಿದೆ. ಕುಂಭಕೋಣದಿಂದಲೂ ಸಹ ಹೋಗಿ ಬರಬಹುದು. ಟೌನ್ ಬಸ್ಸುಗಳು ಓಡಾಡುತ್ತವೆ. ಆದರೆ ವಿರಳ. ಚಿಕ್ಕ ಊರಾಗಿದ್ದು ಯಾವ ಸೌಕರ್ಯಗಳೂ ಇಲ್ಲ.

ವೈಖಾಸನ ಆಗಮ ರೀತ್ಯಾ ಪೂಜಾವಿಧಿಗಳು ನಡೆಯುತ್ತವೆ. ಪ್ರಾಕಾರದಲ್ಲಿರುವ ಗರುಡನ ವಿಗ್ರಹವು ಶಂಖ ಮತ್ತು ಚಕ್ರಗಳನ್ನು ಧರಿಸಿರುವ ವಿಗ್ರಹ. 108 ದಿವ್ಯ ದೇಶಗಳಲ್ಲಿ ಈ ಸ್ಥಳದಲ್ಲಿ ಮಾತ್ರ ಇದನ್ನು ವೀಕ್ಷಿಸಬಹುದು.

ಬಲಿ ಚಕ್ರವರ್ತಿಯು ಯಾಗ ಮಾಡುವಾಗ ಒಬ್ಬ ಬ್ರಾಹ್ಮಣ ವಟುವು ಬಂದು ಮೂರು ಹೆಜ್ಜೆಗಳ ಜಾಗವನ್ನು ಕೊಡೆಂದು ಬೇಡುವನು. ಚಕ್ರವರ್ತಿಯು ಆಗಲೆಂಬಂತೆ ಸಮ್ಮತಿಸುವನು. ಅಲ್ಲೇ ಇದ್ದ ಶುಕ್ಲಾಚಾರಿ ಚಕ್ರವರ್ತಿಗೆ ಎಚ್ಚರಿಕೆಯನ್ನು ನೀಡುತ್ತಾನೆ. ಆದರೂ ಕೇಳದೆ ಬಲಿ ಚಕ್ರವರ್ತಿಯು ಜಾಗ ನೀಡಲು ಕಮಂಡಲದಿಂದ ನೀರನ್ನು ಬ್ರಾಹ್ಮಣ ವಟುವಿಗೆ ಧಾರೆ ಎರೆಯಲು ಮುಂದಾಗುತ್ತಾನೆ. ಬಲಿ ಚಕ್ರವರ್ತಿ ತನ್ನ ಮಾತನ್ನು ಕೇಳದೆ ಜಾಗವನ್ನು ದಾನ ಮಾಡಲು ಮುಂದಾದ ರಾಜನಿಗೆ ಅಡ್ಡಿಯನ್ನುಂಟು ಮಾಡಲು ಶುಕ್ಲಾಚಾರಿ ಕಮಂಡಲದ ಕಿಂಡಿಯಲ್ಲಿ ಹುಳುವಿನ ರೂಪದಲ್ಲಿ ಹೋಗಿ ನೀರು ಬೀಳದಂತೆ ಅಡ್ಡಿ ಮಾಡುತ್ತಾನೆ. ಆಗ ಆ ಬ್ರಾಹ್ಮಣ ವಟುವು ಕಮಂಡಲದ ಕಿಂಡಿಯಲ್ಲಿ ಏನೋ ಧೂಳು ಇರಬಹುದೆಂದು ಹೇಳಿ ದರ್ಬೆಯಿಂದ ಕಮಂಡಲದ ಕಿಂಡಿಯನ್ನು ಸ್ವಚ್ಛ ಮಾಡುತ್ತಾನೆ. ಆಗ ಹುಳುವಿನ ರೂಪದಲ್ಲಿದ್ದ ಶುಕ್ಲಾಚಾರಿಗೆ ಒಂದು ಕಣ್ಣು ಹೋಗುತ್ತದೆ. ಶುಕ್ಲಾಚಾರಿಯು ತನ್ನ ಕಣ್ಣನ್ನು ವಾಪಸ್ ಪಡೆಯಲು ಈ ಸ್ಥಳದಲ್ಲಿ ಭಕ್ತಿಯಿಂದ ಪೂಜೆ ಸಲ್ಲಿಸುತ್ತಾನೆ. ಆದ ಕಾರಣ ಈ ಊರಿಗೆ ಶುಕ್ಲ (ವೆಳ್ಳಿ) ವೆಳ್ಳಿಯಂಗುಡಿ ಎಂಬ ಹೆಸರು ಬಂದಿತು.

ಮೂಲವರ್ : ಶ್ರೀ ಕೋಲವಿಲ್ಲಿರಾಮ
ಉತ್ಸವರ್ : ಶೃಂಗಾರ ಸುಂದರನ್
ತಾಯಾರ್ : ಮರಗದವಲ್ಲಿ
ತೀರ್ಥಂ : ಶುಕ್ಲ ತೀರ್ಥಂ, ಬ್ರಹ್ಮ ತೀರ್ಥಂ, ಇಂದ್ರ ತೀರ್ಥಂ, ಪರಶುರಾಮ ತೀರ್ಥಂ.
ಸ್ಥಳ ವೃಕ್ಷಂ : ಕದಳಿ (ಬಾಳೆ)
ವಿಮಾನಂ : ಪುಷ್ಕಳ ವರ್ತಕ
ಪ್ರತ್ಯಕ್ಷಗೊಂಡಿರುವುದು: ಶುಕ್ಲ, ಬ್ರಹ್ಮ, ಇಂದ್ರ, ಪರಶುರಾಮ, ಯಮ, ಮಾರ್ಕಂಡೇಯ, ಭೂಮಿ ದೇವಿ

ಮಂಗಳಶಾಸನ ಮಾಡಿರುವವರು :
1. ತಿರುಮಂಗೈಆಳ್ವಾರ್

# 23. ತಿರುವಳುಂದೂರ್ (ತೇರಳಂದೂರ್)

**॥ ಓಂ ಶ್ರೀಸೆಂಗಮಲವಲ್ಲಿ ಸಮೇತ ಶ್ರೀಆಮರುವಿಯಪ್ಪ ಸ್ವಾಮಿನೇ ನಮಃ ॥**

ಮಾಯಾವರಂ(ಮಯಿಲಾಡುದುರೈ) ಮತ್ತು ಕುಂಭಕೋಣಗಳ ನಡುವೆ ಇರುವ ಕುತ್ತಂಲಂಗೆ 3–4 ಕಿ.ಮೀ. ದೂರದಲ್ಲಿರುವ ಕ್ಷೇತ್ರ. ಇಲ್ಲಿ ರೈಲ್ವೆಸ್ಟೇಷನ್ ಸಹ ಉಂಟು. ಮಾಯಾವರಂನಿಂದ ತೇರಳಂದೂರಿಗೆ ಟೌನ್ ಬಸ್‌ಗಳುಂಟು.

ಉಪರಿಶರವಸು ಎಂಬ ಮಹಾರಾಜನು ರಥವನ್ನೇರಿ ದೇವಲೋಕಕ್ಕೆ ಪಯಣಿಸುವ ಶಕ್ತಿ ಹೊಂದಿದ್ದನು. ಒಂದು ದಿನ ದೇವರುಗಳಿಗೂ ಋಷಿ ಮುನಿಗಳಿಗೂ ಯಾವುದೋ ಒಂದು ಚರ್ಚೆ ನಡೆಯುತ್ತಿದ್ದಾಗ ಈ ಉಪರಿಶರವಸು ಮಹಾರಾಜನು ಚರ್ಚೆಯಲ್ಲಿ ಭಾಗವಹಿಸಿ ಏಕಪಕ್ಷೀಯವಾಗಿ ತನ್ನ ನಿರ್ಧಾರವನ್ನು ತಿಳಿಸಿದನು. ಇದರಿಂದ ಕುಪಿತಗೊಂಡ ಋಷಿ ಮುನಿಗಳು ಉಪರಿಶರವಸು ಮಹಾರಾಜನಿಗೆ ಶಾಪವನ್ನಿತ್ತರು. ಆದಕಾರಣ ದೇವಲೋಕದಲ್ಲಿದ್ದ ರಾಜನು ತನ್ನ ರಥದ ಸಮೇತ ದೇವಲೋಕದಿಂದ ಭೂಲೋಕದ ಈ ಸ್ಥಳದಲ್ಲಿ ಒಂದು ಕೊಳದಲ್ಲಿ ಬಂದು ಬಿದ್ದನು. ಆ ಕಾರಣದಿಂದ ಈ ಸ್ಥಳವನ್ನು ತೇರ್ ಉಳಂದೂರ್ ಅಥವಾ ತೇರಳಂದೂರ್ ಎಂದು ಕರೆಯುತ್ತಾರೆ.

ಶ್ರೀಕೃಷ್ಣನು ಗೋಕುಲದಲ್ಲಿ ಹಸುಗಳನ್ನು ಮೇಯಿಸುತ್ತಿದ್ದನು. ನಡುವೆ ಯಮುನಾ ನದಿಯಲ್ಲಿ ಸ್ನಾನ ಮಾಡಲು ತೆರಳಿದನು. ಆ ಸಮಯದಲ್ಲಿ ಬ್ರಹ್ಮನು ಅಲ್ಲಿದ್ದ ಹಸುಗಳನ್ನು ಈ ಸ್ಥಳಕ್ಕೆ ಕರೆದುಕೊಂಡು ಬಂದನು. ಅದನ್ನು ತಿಳಿದ ಕೃಷ್ಣನು ತನ್ನ ಮಾಯೆಯಿಂದ ಮತ್ತೊಮ್ಮೆ ಹಸು ಮಂದೆಯನ್ನು ಸೃಷ್ಟಿಸಿದನು. ಬ್ರಹ್ಮನು ತನ್ನ ತಪ್ಪನ್ನು ಅರಿತು ಕೃಷ್ಣನಲ್ಲಿ ಕ್ಷಮೆ ಕೇಳಿ ತಾವು ಇದೇ ಊರಿನಲ್ಲಿ ಹಸುಗಳ ಮಂದೆಯನ್ನು ಮೇಯಿಸಿಕೊಂಡು ಇರಬೇಕು ಎಂದು ಕೇಳಿಕೊಂಡನು. ಅದಕ್ಕೆ ಕೃಷ್ಣನು ಒಪ್ಪಿ ಆಮರು ವೀಯಪ್ಪನ್ (ಆಮರು – ಹಸುಗಳು, ವೀಯಪ್ಪನ್ – ಮೇಯಿಸುವವ – ಹಸುಗಳನ್ನು ಮೇಯಿಸುವವ) ಎಂಬ ಹೆಸರಿನಿಂದ ಈ ಊರಿನಲ್ಲಿ ವಿರಾಜಮಾನವಾಗಿದ್ದಾನೆ.

ಈ ಕ್ಷೇತ್ರವು ತಮಿಳ್ ರಾಮಾಯಣ ಕರ್ತೃವಾದ ಕಂಬ ನಾಟ್ಟಾರ್ ಅವರ ಜನ್ಮಸ್ಥಳ. ದೇವಸ್ಥಾನದಿಂದ ಸ್ವಲ್ಪ ದೂರದಲ್ಲಿ ಕಂಬರ್ ಅವರ ಮನೆ(ಕಂಬರ್ ಮೇಡೈ) ಇದೆ.

ಮೂಲವರ್ : ದೇವಾದಿ ರಾಜನ್

ಉತ್ಸವರ್ : ಆಮರುವೀಯಪ್ಪನ್

ತಾಯಾರ್ : ಸೆಂಗಮಲವಲ್ಲಿ

ತೀರ್ಥಂ : ದರ್ಶನ ಪುಷ್ಕರಣಿ, ಕಾವೇರಿ

ವಿಮಾನಂ : ಗರುಡ ವಿಮಾನಂ

ಪ್ರತ್ಯಕ್ಷಗೊಂಡಿರುವುದು: ಉಪರಿಶರವಸು, ಬ್ರಹ್ಮ, ಕಾವೇರಿ, ಗರುಡ, ಅಗಸ್ತ್ಯ

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್

  

## ಅಭಿಮಾನ ಸ್ಥಳಗಳು

1. ಗುಣಶೀಲಂ (ಬೆಂಗಳೂರು - ತಿರುಚಿ ಮಾರ್ಗ)
2. ನಾಮಕ್ಕಲ್ (ಬೆಂಗಳೂರು - ತಿರುಚಿ ಮಾರ್ಗ)
3. ತಾನ್‌ತೋಂಡ್ರಿಮಲ್ಲೈ (ತಿರುಚಿ - ಈರೋಡು ಮಾರ್ಗ)
4. ಪೆರುಂಗುಳಿಯೂರ್ (ತಿರುಚಿ - ಕುಂಭಕೋಣಂ)
5. ತಿರುಮಂಡಂಗುಡಿ (ಕುಂಭಕೋಣಂ - ತಿರುವೈಯ್ಯಾರು)
6. ಚಿಕ್ಕಲ್ (ತಿರುವಾರು - ನಾಗಪಟ್ಟಣ)
7. ವಡುವೂರ್ (ತಂಜಾವೂರ್ - ಮನ್ನಾರ್‌ಗುಡಿ)
8. ಆದಿರಂಗಂ (ತಂಜಾವೂರ್ - ವೇದಾರಣ್ಯಂ)
9. ಕೋಡಿಕ್ಕರೈ (ವೇದಾರಣ್ಯಂ - ತಿರುತ್ತುರೈಪೂಂಡಿ)
10. ತಿಲ್ಲೈವಿಳಾಕಂ (ತಿರುತ್ತುರೈಪೂಂಡಿ - ಪಟ್ಟುಕ್ಕೋಟ್ಟೈ)
11. ಕಾಟ್ಟು ಮನ್ನಾರ್‌ಗುಡಿ (ಚಿದಂಬರಂ)
12. ಪಚ್ಚೈವಣ್ಣನ್ (ಕಾಂಚೀಪುರ)
13. ಕಾಮಕೋಷ್ಟಂ (ಕಾಂಚೀಪುರ)
14. ಶ್ರೀಪೆರುಂಬದೂರ್ (ಬೆಂಗಳೂರು - ಚೆನ್ನೈ)
15. ತಿರುಮಳಿಸೈ (ಚೆನ್ನೈ - ತಿರುವಳ್ಳೂರ್)
16. ಸಿಂಗಪೆರುಮಾಳ್ ಕೋಯಿಲ್ (ಚೆನ್ನೈ - ಚೆಂಗಲ್‌ಪಟ್ಟು)
17. ಮಧುರಾಂತಕಂ (ಚೆನ್ನೈ - ವಿಳುಪ್ಪುರಂ)
18. ಮಂಗಳಗಿರಿ (ಆಂಧ್ರಪ್ರದೇಶ)
19. ವಿಷ್ಣು ಪ್ರಯಾಗ (ಹರಿದ್ವಾರ - ಬದರಿನಾಥ)
20. ಪಾಂಡುಕೇಶ್ವರ್ (ಹರಿದ್ವಾರ - ಬದರಿನಾಥ)
21. ಸಿದ್ಧಪುರ್ (ಮಾತೃಗಯಾ)
22. ಮಂತ್ರಾಲಯ
23. ಶ್ರೀರಂಗಪಟ್ಟಣ
24. ತೊಂಡನೂರ್ (ಮೈಸೂರು - ಮೇಲುಕೋಟೆ)
25. ಶಿವನಸಮುದ್ರ
26. ಟಿ. ನರಸೀಪುರ
27. ಉಡುಪಿ
28. ಗುರುವಾಯೂರ್
29. ನವಪಾಷಾಣಂ (ರಾಮನಾಥಪುರಂ - ರಾಮೇಶ್ವರಂ)

# 24. ತಿರುಚಿರುಪುಳಿಯೂರ್

॥ ಓಂ ಶ್ರೀತಿರುಮಾಮಗಳ್ ಸಮೇತ ಶ್ರೀಅರುಳ್ ಮಾರ್ಕಡಲ್ ಸ್ವಾಮಿನೇ ನಮಃ ॥

ಈ ಕ್ಷೇತ್ರವು ಕೊಲ್ಲುಮಾಂಗುಡಿ ಎಂಬ ರೈಲ್ವೆ ಸ್ಟೇಷನ್ ಇಂದ 2ಕಿ.ಮೀ. ದೂರದಲ್ಲಿದೆ. ಮಾಯಾವರಂನಿಂದ 13 ಕಿ.ಮೀ. ದೂರದಲ್ಲಿ ಮಾಯಾವರಂ ಕಾರೈಕ್ಕುಡಿ ಮಾರ್ಗದಲ್ಲಿ ಸಿಗುತ್ತದೆ. ಬಸ್ ಸ್ಟಾಂಡಿನಿಂದ ದೇವಸ್ಥಾನದ ಸಮೀಪಕ್ಕೆ 4 ಕಿ.ಮೀ. ಆಗುವುದು. ಗಾಡಿಗಳು ಆಟೋಗಳು ಸಿಗುತ್ತವೆ. ಸಿರಿಪ್ಪುಲಿಯಾರ್ ಬಹಳ ಸಣ್ಣ ಊರಾಗಿದ್ದು, ಯಾವ ರೀತಿಯ ವಸತಿ ಸೌಕರ್ಯವಿಲ್ಲ.

ವ್ಯಾಘ್ರಪಾದರ್ ಎಂಬ ಋಷಿ ಚಿದಂಬರಂನ ನಟರಾಜನಲ್ಲಿ ತಪಸ್ಸು ಮಾಡಿ ತನಗೆ ಮೋಕ್ಷವನ್ನು ಕರುಣಿಸಬೇಕೆಂದು ಬೇಡಿಕೊಂಡಾಗ ನಟರಾಜನು ಮೋಕ್ಷವನ್ನು ಕರುಣಿಸುವವನು ನಾನಲ್ಲ ಶ್ರೀಮನ್ನಾರಾಯಣನು ಮಾತ್ರ ನಿನಗೆ ಮೋಕ್ಷ ಕೊಡುವವನು ಎಂದು ತಿಳಿಸಿದನು. ಆಗ ಋಷಿಯು ನಾರಾಯಣನು ಇರುವ ಸ್ಥಳವನ್ನು ತೋರಿಸೆಂದು ಕೇಳಲು ನಟರಾಜನು ಲಿಂಗ ರೂಪಿಯಾಗಿ ದಾರಿ ತೋರಿಸಿದನು. ಲಿಂಗದ ಜೊತೆ ಋಷಿಯು ಹುಲಿ ರೂಪದಲ್ಲಿ ಹಿಂಬಾಲಿಸಿ ಈ ಸ್ಥಳವನ್ನು ತಲುಪಿದರು. ಈ ಸ್ಥಳದಲ್ಲಿ ನಾರಾಯಣನನ್ನು ಋಷಿಯು ತಪಸ್ಸು ಮಾಡಿ ವೈಕುಂಠವನ್ನು ಸೇರಿದರು. ಹುಲಿ ರೂಪದಿಂದ ಬಂದ ವ್ಯಾಘ್ರಪಾದರ್ ಎಂಬ ಋಷಿ ಇಲ್ಲಿ ತಪಸ್ಸು ಮಾಡಿ ವೈಕುಂಠವಾಸಿಯಾದ್ದರಿಂದ ಈ ಊರಿಗೆ ಚಿರುಪ್ಪುಲಿಯೂರ್ ಎಂಬ ಹೆಸರು ಬಂದಿತು.

ಮೂಲವರ್ : ಅರುಳ್ ಮಾರ್ಕಡಲ್ (ಭುಜಂಗ ಶಯನ)
ಉತ್ಸವರ್ : ಕಿರುವಾಸಮುದ್ರಪೆರುಮಾಳ್ (ಅರುಳ್‌ಮಾಕಡಲ್)
ತಾಯಾರ್ : ತಿರುಮಾಮಗಳ್ ನಾಚ್ಚಿಯಾರ್, ದಯಾನಾಯಕಿ
ತೀರ್ಥಂ : ಮಾನಸ ಪುಷ್ಕರಣಿ, ಅನಂತಸರಸ್
ವಿಮಾನಂ : ನಂದವರ್ಧನ
ಪ್ರತ್ಯಕ್ಷಗೊಂಡಿರುವುದು: ವ್ಯಾಘ್ರಪಾದರ್, ವ್ಯಾಸ,

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್

# 25. ತಿರುತಲೈಚಂಗ ನಾನ್‌ಮದಿಯುಂ

॥ ಓಂ ಶ್ರೀತಲೈಚಂಗನಾಯಕಿ ಸಮೇತ ಶ್ರೀನಾನ್‌ಮದಿಯ ಸ್ವಾಮಿನೇ ನಮಃ ॥

ಈ ಕ್ಷೇತ್ರವು ಆಕ್ಕೂರ್ ಎಂಬ ರೈಲ್ವೆ ಸ್ಟೇಷನ್ ಇಂದ 4 ಕಿ.ಮಿ.ದೂರದಲ್ಲಿದೆ. ಆಕ್ಕೂರ್ ಎಂಬುದು ಮಾಯಾವರಂ(ಮಹಿಲಾಡುದುರೈ) ನಿಂದ ಸುಮಾರು 14 ಕಿ.ಮೀ. ದೂರದಲ್ಲಿದೆ. ಸೆಂಬರನ್ ಕೋಯಿಲ್‌ವರೆಗೆ ಬಸ್ಸಿನಲ್ಲಿ ಬಂದು ಅಲ್ಲಿಂದ ಆಟೋರಿಕ್ಷಾ ಮಾಡಿಕೊಂಡು ತಲ್ಲೆಚ್ಚಂಗಾಡನ್ನು ತಲುಪಬಹುದು. ಕೆಲವು ಬಸ್ಸುಗಳು ತಲ್ಲಚ್ಚಂಗಾಡು ಮಾರ್ಗವಾಗಿ ಹಾದು ಹೋಗುತ್ತದೆ. ಆದರೆ ವಿರಳ. ಈ ಸನ್ನಿಧಿಯು ಮುಖ್ಯ ರಸ್ತೆಯಿಂದ 1 ಕಿ.ಮೀ. ಒಳಕ್ಕಿದ್ದು ಗದ್ದೆಗಳ ಮೂಲಕ ಹಾದುಹೋಗಬೇಕು. ಇತ್ತೀಚಿನ ದಿನಗಳಲ್ಲಿ ದೇವಸ್ಥಾನದವರೆಗೂ ರಸ್ತೆ ಇದ್ದು ವಾಹನಗಳಲ್ಲಿ ಹೋಗಬಹುದೆಂದು ತಿಳದುಬಂದಿದೆ. ಬಹಳ ಸಣ್ಣ ದೇವಸ್ಥಾನ ಭಕ್ತಾದಿಗಳು ಹೆಚ್ಚಿನ ಸಂಖ್ಯೆಯಲ್ಲಿ ಬರುವುದಿಲ್ಲ. ಗರ್ಭಗೃಹದಲ್ಲಿ ಆಂಡಾಳ್ ವಿಗ್ರಹವಿದ್ದು, ತಲೆಯ ಮೇಲಿನ ಕೊಂಡೆಯು ಬಲಭಾಗಕ್ಕಿದೆ. (ಸಾಮಾನ್ಯವಾಗಿ ಎಡಭಾಗಕ್ಕಿರುವುದು ಎಲ್ಲಾ ಕಡೆ ಕಂಡುಬರುತ್ತದೆ.)

ಚಂದ್ರನಿಗೆ ಶಾಪ ತೀರಿದ ಸ್ಥಳ. ಆದ್ದರಿಂದ ಊರಿನ ಹೆಸರು ತಲೈಸಂಗ ನಾನ್‌ಮದಿಯ ಪೆರುಮಾಳ್ ಎಂದಾಗಿದೆ.

ಹಿಂದೊಮ್ಮೆ ಆ ಊರಿನ ಸುತ್ತಮುತ್ತ ಇರುವ ಎಲ್ಲಾ ದೇವಾಲಯಗಳ ವಿಗ್ರಹಗಳು ಕಳವಾಯಿತು. ನಂತರ ಈ ದೇವರ ವಿಗ್ರಹವೂ ಕಳವಾಯಿತು. ಈ ವಿಗ್ರಹವನ್ನು ಕಳ್ಳತನ ಮಾಡಿದ ಕಳ್ಳನಿಗೆ ತುಂಬಾ ವ್ಯಾಕುಲವಾಗಿ ವಿಗ್ರಹವನ್ನು ಕಳ್ಳನು ಚೆನ್ನೈ ಹತ್ತಿರದ ಮದುರಾಂದಕಂ ಎಂಬ ಕೆರೆಯಲ್ಲಿ ಬಿಸಾಡಿದನು. ಈ ವಿಷಯವು ಒಬ್ಬ ಭಕ್ತನಿಗೆ ಕನಸಿನಲ್ಲಿ ಗೋಚರವಾಯಿತು. ಭಕ್ತನು ತನ್ನ ಕನಸಿನ ವಿವರವನ್ನು ಅನುಸರಿಸಿ ಮದುರಾಂದಕ ಕೆರೆಯಲ್ಲಿದ್ದ ವಿಗ್ರಹವನ್ನು ಪತ್ತೆ ಹಚ್ಚಿದನು. ನಂತರ ಉಳಿದ ಎಲ್ಲಾ ದೇಗುಲಗಳ ವಿಗ್ರಹಗಳೂ ಪತ್ತೆಯಾಯಿತು. ಎಲ್ಲಾ ವಿಗ್ರಹಗಳನ್ನು ಮರಳಿ ಊರಿಗೆ ತರಲಾಯಿತು. ಈ ಎಲ್ಲಾ ವಿಗ್ರಹಗಳ ಪತ್ತೆಗೆ ಸಹಕಾರಿಯಾದ ಈ ಊರಿನ ವಿಗ್ರಹವನ್ನು ನಾಯಕನನ್ನಾಗಿಸಿ ನಾನ್‌ಮದಿಯ ಪೆರುಮಾಳ್ ಎಂಬ ಹೆಸರಿನಿಂದ ಪುನರ್ ಪ್ರತಿಷ್ಠಾಪಿಸಲಾಯಿತು.

ಮೂಲವರ್ : ನಾನ್‌ಮದಿಯ ಪೆರುಮಾಳ್
ಉತ್ಸವರ್ : ವೆನ್‌ಸುಡರ್ ಪೆರುಮಾಳ್
ತಾಯಾರ್ : ತಲೈಚಂಗ ನಾಚ್ಚಿಯಾರ್, ಚೆಂಗಮಲವಲ್ಲಿ
ತೀರ್ಥಂ : ಚಂದ್ರ ಪುಷ್ಕರಣಿ
ವಿಮಾನಂ : ಚಂದ್ರ ವಿಮಾನಂ
ಪ್ರತ್ಯಕ್ಷಗೊಂಡಿರುವುದು: ಚಂದ್ರನ್, ದೇವಾದಿ ದೇವತೆಗಳು, ನಿತ್ಯ ಸೂರ್ಯ
ಮಂಗಳಶಾಸನ ಮಾಡಿರುವವರು : 1. ತಿರುಮಂಗೈಆಳ್ವಾರ್

# 26. ತಿರುಯಿಂದಲೂರ್(ಇಂದಲೂರ್)

**। ಓಂ ಶ್ರೀಚಂದ್ರಶಾಪವಿಮೋಚನವಲ್ಲಿ ಸಮೇತ ಶ್ರೀಪರಿಮಳರಂಗನಾಥ ಸ್ವಾಮಿನೇ ನಮಃ ।**

ಮಾಯಾವರಂನಿಂದ 5ಕಿ.ಮೀ. ಉತ್ತರದಲ್ಲಿದೆ. ಮಾಯಾವರಂನಿಂದ ಬಸ್ ಸೌಕರ್ಯ ಉಂಟು. ಆಟೋರಿಕ್ಷಾ ಮತ್ತು ಟ್ಯಾಕ್ಸಿಗಳಲ್ಲೂ ಸಹ ಹೋಗಿಬರಬಹುದು.

ತಿರುಮಂಗೈ ಆಳ್ವಾರ್ ಅವರು ದೇವರ ದರ್ಶನಕ್ಕಾಗಿ ಬಂದಾಗ ಸಮಯ ಮೀರಿ ಹೋಗಿ ಪೂಜೆ ಮುಗಿದು ದೇವಸ್ಥಾನದ ಬಾಗಿಲು ಮುಚ್ಚಿಬಿಟ್ಟಿತ್ತು. ಬಾಗಿಲು ಮುಚ್ಚಿರುವುದನ್ನು ನೋಡಿ ಕೋಪಗೊಂಡು ವಾಳ್‌ನ್ದೇಪೋಮ್ ನೀರೇ(ನೀವೇ ಸಂತೋಷದಿಂದಿರಿ) ಎಂದು ದೇವರನ್ನು ನಿಂದಿಸಿದನು. ಆಗ ದೇವನೂ ಸಹ ಆಳ್ವರ್‌ನೊಡನೆ ವಾಗ್ವಾದ ಮಾಡುವನು. ಕೊನೆಗೆ ದೇವರು ಸಂತೃಪ್ತಿ ಹೊಂದಿ ದರ್ಶನ ನೀಡಿದನೆಂದು ಪ್ರತೀತಿ ಉಂಟು.

ನವಗ್ರಹದಲ್ಲಿ ಒಬ್ಬನಾದ ಚಂದ್ರನು (ತನಗುಂಟಾಗಿರುವ ದೋಷವು ಏನೆಂದು ತಿಳಿಯದೇ) ದೋಷಪರಿಹಾರಕ್ಕಾಗಿ ಈ ಸ್ಥಳದಲ್ಲಿ ತಪಸ್ಸು ಮಾಡಿ ದೋಷನಿವಾರಣೆ ಮಾಡಿಕೊಂಡನು. ಚಂದ್ರನಿಗೆ ಇಂದು ಎಂಬ ಹೆಸರೂ ಉಂಟು. ಆದ ಕಾರಣದಿಂದ ಈ ಊರಿಗೆ ಇಂದಲೂರ್ ಎಂಬ ಹೆಸರಿರಬೇಕೆಂದು ದೇವರನ್ನು ಪ್ರಾರ್ಥಿಸಿದನು.

ಇದನ್ನು ಪಂಚರಂಗ ಕ್ಷೇತ್ರ ಎನ್ನುತ್ತಾರೆ.

1. ಆದಿರಂಗ – ಶ್ರೀರಂಗ ಪಟ್ಟಣ (ಮೈಸೂರು)
2. ಅಪ್ಪಾಲರಂಗ – ತಿರುಪ್ಪೇರ್ ನಗರ್ (ಕೋವಿಲಡಿ)
3. ಮಧ್ಯರಂಗ – ಶ್ರೀರಂಗಂ
4. ಚತುರ್ಥ ರಂಗ – ಕುಂಭಕೋಣಂ
5. ಪಂಚರಂಗ – ತಿರುಇಂದಲೂರ್ (ಮಾಯಾವರಂ)

ಮೂಲವರ್ : ಪರಿಮಳ ರಂಗನಾಥನ್, ಸುಗಂಧವನನಾಥನ್
ತಾಯಾರ್ : ಪರಿಮಳ ರಂಗನಾಯಕಿ, ಚಂದ್ರಶಾಪ ವಿಮೋಚನವಲ್ಲಿ
ತೀರ್ಥಂ : ಇಂದು ಪುಷ್ಕರಣಿ
ವಿಮಾನಂ : ವೇದ ಚಕ್ರ
ಪ್ರತ್ಯಕ್ಷಗೊಂಡಿರುವುದು: ಚಂದ್ರ

ಮಂಗಳಶಾಸನ ಮಾಡಿರುವವರು : 1. ತಿರುಮಂಗೈಆಳ್ವಾರ್

# 27. ತಿರುಕಾವಲಂಬಾಡಿ

**॥ ಓಂ ಶ್ರೀಮಡವರಲ್‌ಮಂಗೈ ಸಮೇತ ಶ್ರೀಗೋಪಾಲಕೃಷ್ಣ ಸ್ವಾಮಿನೇ ನಮಃ ॥**

ಈ ಕ್ಷೇತ್ರವು ತಿರುನಾಂಗೂರ್ 11 ಗರುಡ ಸೇವೆಯ ಸ್ಥಳ.

ಜನವರಿ ತಿಂಗಳು ಪುಷ್ಯ ಮಾಸ (ತೈ) ಅಮಾವಾಸ್ಯೆ ಮರುದಿನ ತಿರುನಾಂಗೂರಿನಲ್ಲಿ ನಡೆಯುವ ಗರುಡ ಸೇವೆಗೆ ಈ ದೇವರು ಪಾಲ್ಗೊಳ್ಳುವರು.

ಮೂಲವರ್ : ಗೋಪಾಲಕೃಷ್ಣ

ಉತ್ಸವರ್ : ರಾಜಗೋಪಾಲ

ತಾಯಾರ್ : ಮಡವರಲ್ ಮಂಗೈ, ಚೆಂದಮಲ ನಾಚ್ಚಿಯಾರ್, ರುಕ್ಮಿಣಿ, ಸತ್ಯಭಾಮ

ತೀರ್ಥಂ : ತಡಮಲರ್ ಪೇಗೈ

ವಿಮಾನಂ : ಸ್ವಯಂಭು ವಿಮಾನಂ

ಪ್ರತ್ಯಕ್ಷಗೊಂಡಿರುವುದು: ಸೇನಾಧಿಪತಿ, ರುದ್ರ

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್



# 28. ತಿರುಕಾಳಿ ಶ್ರೀರಾಮವಿನ್ನಗರಂ

**॥ ಓಂ ಶ್ರೀಲೋಕನಾಯಕಿ ಸಮೇತ ಶ್ರೀತಾಡಾಲನ್ ಸ್ವಾಮಿನೇ ನಮಃ ॥**

ಶಿರ್‌ಕಾಳಿಯು ಮಾಯಾವರಂ ಮತ್ತು ಚಿದಂಬರಂ ನಡುವೆ ಇರುವ ಒಂದು ದೊಡ್ಡ ಊರು. ರೈಲ್ವೆಸ್ಟೇಷನ್ ಇದೆ. ಎಲ್ಲಾ ಕಡೆಯಿಂದಲೂ ಬಸ್ ಸೌಲಭ್ಯಗಳುಂಟು ವಸತಿ ಮತ್ತು ಇತರ ಸೌಕರ್ಯಗಳಿವೆ.

ಈ ಸ್ಥಳದಲ್ಲಿಯೇ ತಿರುಮಂಗೈ ಆಳ್ವಾರರು, ತಿರುಜ್ಞಾನ ಸಂಬಂಧರನ್ನು ವಾದದಲ್ಲಿ ಸೋಲಿಸಿ, ಅವರ್ 'ವೇಟ್ರವೇಲ್' ಅನ್ನು ಬಹುಮಾನವಾಗಿ ಪಡೆದು ನಾಲುಕವಿಪೆರುಮಾಳ್ ಎಂಬ ಬಿರುದನ್ನೂ ಪಡೆದರು.

ಬ್ರಹ್ಮನಿಗೆ ಗರ್ವ ಬಂದಿದ್ದಾಗ ರೋಮಸ ಮುನಿಯು ಬ್ರಹ್ಮನಿಗೆ 'ನಿನ್ನ ಆಯಸ್ಸು ನನ್ನ ಒಂದು ಕೂದಲಿಗೆ ಸಮ' ಎಂದು ಹೇಳಿ ಅವರ ಗರ್ವವನ್ನು ಕಡಿಮೆ ಮಾಡಿದರು.

ತ್ರಿವಿಕ್ರಮನು (ವಾಮನನು) ಭೂಮಿಯನ್ನು ಆಕಾಶವನ್ನು ತನ್ನ ಕಾಲಿನಿಂದ ಅಳತೆ ಮಾಡುವಾಗ ಅವನಿಗೆ 'ತಡಾಲನ್' (ಕಾಲಿನಿಂದ ಅಳತೆ ಮಾಡಿದವ) ಎಂಬ ಹೆಸರು ಬಂದಿತು. ಇಲ್ಲಿ ವಾಮನನು ತನ್ನ ಕಾಲನ್ನು ಅಳತೆ ಮಾಡುತ್ತಿರುವ ಭಂಗಿಯಲ್ಲಿ ನಿಂತಿದ್ದಾನೆ. ಪ್ರತಿ ವೈಕುಂಠ ಏಕಾದಶಿಯಂದು ದೇವರ ಅಂಗಾಲಿನ (ಪಾದದ ಕೆಳಗಿನ ಭಾಗ) ದರ್ಶನ ಮಾಡಬಹುದು.

ಬಲಿ ಚಕ್ರವರ್ತಿಯು ಯಾಗ ಮಾಡಿದ ಸ್ಥಳದ ಸಮೀಪ ವಿಶ್ವಾಮಿತ್ರನು ಯಾಗ ಮಾಡುವ ಸಮಯದಲ್ಲಿ ರಾಕ್ಷಸರ ಉಪಟಳ ಜಾಸ್ತಿಯಾಗಿತ್ತು. ಆ ಕಾರಣ ವಿಶ್ವಾಮಿತ್ರನು ಶ್ರೀರಾಮನನ್ನು ಕರೆದುಕೊಂಡು ಬಂದು ಕಾವಲಿಗಿರಿಸಿ ತನ್ನ ಯಾಗವನ್ನು ಪೂರ್ಣ ಮಾಡಿದನು. ಶ್ರೀರಾಮನು ತನ್ನ ಬಿಲ್ಲು ಬಾಣಗಳ ಸಮೇತ ಇಲ್ಲಿ ಬಂದು ನಿಂತಿದ್ದರಿಂದ ಈ ಸ್ಥಳವನ್ನು 'ಶ್ರೀರಾಮ ವಿಣ್ಣಹರಂ' ಎಂದೂ ಕರೆಯಲಾಗಿದೆ.

ಮೂಲವರ್ : ತಿರು ವಿಕ್ರಮನ್, ತಾಡಾಲನ್, ವಾಮನ ಮೂರ್ತಿ
ಉತ್ಸವರ್ : ತಿರುವಿಕ್ರಮನ್ (ತ್ರಿವಿಕ್ರಮ)
ತಾಯಾರ್ : ಲೋಕನಾಯಕಿ, ಮಟ್ಟವಿಳ್ಕುಳಲಿ
ತೀರ್ಥಂ : ಶಂಖ ಪುಷ್ಕರಣಿ, ಚಕ್ರ ತೀರ್ಥಂ
ವಿಮಾನಂ : ಪುಷ್ಕಳಾವರ್ತ ವಿಮಾನಂ
ಪ್ರತ್ಯಕ್ಷಗೊಂಡಿರುವುದು: ಅಷ್ಟಕೋಣ ಮಹರ್ಷಿ, ರೋಮಸ ಮುನಿ

ಮಂಗಳಶಾಸನ ಮಾಡಿರುವವರು : 1. ತಿರುಮಂಗೈಆಳ್ವಾರ್

# 29. ತಿರುಅರಿಮೇಯ ವಿನ್ನಗರಂ (ಕೂಡಮಾಡುಂಕೂತ್ತರ್)

॥ ಓಂ ಶ್ರೀಅಮೃತಕಡವಲ್ಲಿ ಸಮೇತ ಶ್ರೀಕುಡಮಾಡುಂಕುತ್ತನ್ ಸ್ವಾಮಿನೇ ನಮಃ ॥

ಈ ಕ್ಷೇತ್ರವು ತಿರುನಾಂಗೂರ್ 11 ಗರುಡ ಸೇವೆಯ ಸ್ಥಳ.

ಜನವರಿ ತಿಂಗಳು ಪುಷ್ಯ ಮಾಸ (ತೈ) ಅಮಾವಾಸ್ಯೆ ಮರುದಿನ ತಿರುನಾಂಗೂರಿನಲ್ಲಿ ನಡೆಯುವ ಗರುಡ ಸೇವೆಗೆ ಈ ದೇವರು ಪಾಲ್ಗೊಳ್ಳುವರು.

ಮೂಲವರ್ : ಕುಡಮಾಡುಂಕೂತ್ತನ್
ಉತ್ಸವರ್ : ಚತುರ್ಭುಜ ಗೋಪಾಲ
ತಾಯಾರ್ : ಅಮೃತಕಡವಲ್ಲಿ
ತೀರ್ಥಂ : ಕೋಟಿ ತೀರ್ಥಂ, ಅಮೃತ ತೀರ್ಥಂ
ವಿಮಾನಂ : ಉಚ್ಚಚರುಂದ ವಿಮಾನಂ
ಪ್ರತ್ಯಕ್ಷಗೊಂಡಿರುವುದು : ಉದಂಗ ಮುನಿ

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್

# 30. ತಿರುವಣ್ ಪುರುಷೋತ್ತಮಂ

॥ ಓಂ ಶ್ರೀಪುರುಷೋತ್ತಮನಾಯಕಿ ಸಮೇತ ಶ್ರೀಪುರುಷೋತ್ತಮ ಸ್ವಾಮಿನೇ ನಮಃ ॥

ಈ ಕ್ಷೇತ್ರವು ತಿರುನಾಂಗೂರ್ 11 ಗರುಡ ಸೇವೆಯ ಸ್ಥಳ.

ಜನವರಿ ತಿಂಗಳು ಪುಷ್ಯ ಮಾಸ (ತೈ) ಅಮಾವಾಸ್ಯೆ ಮರುದಿನ ತಿರುನಾಂಗೂರಿನಲ್ಲಿ ನಡೆಯುವ ಗರುಡ ಸೇವೆಗೆ ಈ ದೇವರು ಪಾಲ್ಗೊಳ್ಳುವರು.

ಮೂಲವರ್ : ಶ್ರೀ ಪುರುಷೋತ್ತಮ
ತಾಯಾರ್ : ಪುರುಷೋತ್ತಮ ನಾಯಕಿ
ತೀರ್ಥಂ : ಕ್ಷೀರ ಸಮುದ್ರ
ವಿಮಾನಂ : ಸಂಜೀವಿ ವಿಗ್ರಹ ವಿಮಾನಂ
ಪ್ರತ್ಯಕ್ಷಗೊಂಡಿರುವುದು : ಉಪಮನ್ಯ
ಮಂಗಳಶಾಸನ ಮಾಡಿರುವವರು : 1. ತಿರುಮಂಗೈಆಳ್ವಾರ್

# 31. ತಿರುಸೆಂಪೊನ್‌ಸ್ಯೈ ಕೋಯಿಲ್

॥ ಓಂ ಶ್ರೀಅಲ್ಲಿಮಾಮಲರ್‌ಮಂಗೈ ಸಮೇತ ಶ್ರೀಪೇರರುಳಾಲ ಸ್ವಾಮಿನೇ ನಮಃ ॥

ಈ ಕ್ಷೇತ್ರವು ತಿರುನಾಂಗೂರ್ 11 ಗರುಡ ಸೇವೆಯ ಸ್ಥಳ.

ಜನವರಿ ತಿಂಗಳು ಪುಷ್ಯ ಮಾಸ (ತೈ) ಅಮಾವಾಸ್ಯೆ ಮರುದಿನ ತಿರುನಾಂಗೂರಿನಲ್ಲಿ ನಡೆಯುವ ಗರುಡ ಸೇವೆಗೆ ಈ ದೇವರು ಪಾಲ್ಗೊಳ್ಳುವರು.

ರಾವಣ ವಧೆಯ ನಂತರ ರಾಮನಿಗೆ ಬ್ರಹ್ಮ ಹತ್ಯಾ ದೋಷ ಆವರಿಸುತ್ತದೆ. ಅದನ್ನು ನಿವಾರಿಸಿಕೊಳ್ಳಲು ಈ ಕ್ಷೇತ್ರದಲ್ಲಿ ತ್ರಿನೇತ್ರ ಋಷಿ ಆಶ್ರಮದಲ್ಲಿ 3 ದಿನ ವಾಸ ಮಾಡಿ ಬ್ರಾಹ್ಮಣನಿಗೆ ಚಿನ್ನದ ಗೋದಾನವನ್ನು ಮಾಡುತ್ತಾರೆ. ಆ ಬ್ರಾಹ್ಮಣನು ಆ ಬಂಗಾರದ ಗೋವಿನಿಂದ ಈ ದೇವಾಲಯವನ್ನು ಕಟ್ಟಿಸುತ್ತಾನೆ.

ಕಾಂಚೀಪುರದಲ್ಲಿದ್ದ ಕಾಕ್ಷಿಯಪ್ಪನ್ ಎಂಬ ಬ್ರಾಹ್ಮಣನ ಮಗ ಮುಕುಂದನು ಈ ಕ್ಷೇತ್ರದಲ್ಲಿ ಮೂರೇ ದಿನದಲ್ಲಿ 32,000 ಸಲ ಅಷ್ಟಾಕ್ಷರ ಜಪ ಮಾಡಿ ತನ್ನ ತಂದೆಯ ಕಷ್ಟವನ್ನು ನೀಗಿಸಿದನು. ಆದ ಕಾರಣ ಇಲ್ಲಿನ ದೇವರಿಗೆ ಪೇರರುಳಾಳನ್ (ಕೇಳಿದ್ದಕ್ಕಿಂತ ಹೆಚ್ಚಿಗೆ ಕೊಡುವವ) ಎಂಬ ಹೆಸರು. ನಾವೂ ಸಹ ಇಲ್ಲಿ ಭಕ್ತಿಯಿಂದ ಬೇಡಿ ನಮ್ಮ ಸಂಕಷ್ಟಗಳನ್ನು ನೀಗಿಸಿಕೊಳ್ಳಬಹುದು.

ಮೂಲವರ್ : ಪೇರರುಳಾಳ
ಉತ್ಸವರ್ : ಹೇಮರಂಗರ್, ಚೆಂಬುನ್ನ ರಂಗ
ತಾಯಾರ್ : ಅಲ್ಲಿಮಾಮಲರ್ ನಾಚ್ಚಿಯಾರ್
ತೀರ್ಥಂ : ನಿತ್ಯ ಪುಷ್ಕರಣಿ, ಕನಕ ತೀರ್ಥಂ
ವಿಮಾನಂ : ಕನಕ ವಿಮಾನಂ
ಪ್ರತ್ಯಕ್ಷಗೊಂಡಿರುವುದು: ರುದ್ರ (ಶಿವ)

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್

# 32. ತಿರುಮಣಿ ಮಾಡಕೋಯಿಲ್

॥ ಓಂ ಶ್ರೀಪುಂಡರೀಕವಲ್ಲಿ ಸಮೇತ ಶ್ರೀನಂದಾವಿಳಕ್ಕು ಸ್ವಾಮಿನೇ ನಮಃ ॥

ಈ ಕ್ಷೇತ್ರವು ತಿರುನಾಂಗೂರ್ 11 ಗರುಡ ಸೇವೆಯ ಸ್ಥಳ.

ಜನವರಿ ತಿಂಗಳು ಪುಷ್ಯ ಮಾಸ (ತೈ) ಅಮಾವಾಸ್ಯೆ ಮರುದಿನ ತಿರುನಾಂಗೂರಿನಲ್ಲಿ ನಡೆಯುವ ಗರುಡ ಸೇವೆಗೆ ಈ ದೇವರು ಪಾಲ್ಗೊಳ್ಳುವರು.

ಶೀರ್ಕಾಳಿ ಮತ್ತು ಮಾಯಾವರಂನಿಂದ 10ಕಿ.ಮೀ. ಆಸುಪಾಸಿನಲ್ಲಿದೆ.

ಸುತ್ತಮುತ್ತಲಿರುವ 11 ಪೆರುಮಾಳ್ ದೇವರು ಗರುಡ ವಾಹನದಲ್ಲಿ ಇದೇ ಸ್ಥಳಕ್ಕೆ ಬರುತ್ತಾರೆ. ಒಂದೇ ಕಡೆ 11 ಪೆರಿಮಾಳ್‌ಗಳ ದರ್ಶನ ಮಾಡಬಹುದು.

ಶ್ರೀಮನ್ನಾರಾಯಣನು ಸದಾಕಾಲ ಆದಿಶೇಷನ ಮೇಲೆ ಪವಡಿಸಿರುತ್ತಾನೆ. ಅಂತಹದರಲ್ಲಿ ಗರುಡ ವಾಹನಾರೂಢನಾಗಿ ದರ್ಶನ ಕೊಡುವುದು ಅಪರೂಪ. ತಿರುಪತಿ ಮುಂತಾದ ಕಡೆ ಒಂದೇ ಗರುಡ ವಾಹನಾರೂಢ ಭಗವಂತನ ದರ್ಶನ ಆಗುವುದು. ಈ ಸ್ಥಳದಲ್ಲಿ 11 ಪೆರುಮಾಳ್‌ಗಳ ಗರುಡ ವಾಹನ ಸೇವೆಯನ್ನು ಕಣ್ತುಂಬಿಕೊಳ್ಳುವುದು ನಮ್ಮ ಪೂರ್ವ ಜನ್ಮದ ಸುಕೃತ.

ಈ ದೇವಾಲಯದಲ್ಲಿ ತಿರುಮಂಗೈ ಆಳ್ವಾರು ಮತ್ತವರ ಶ್ರೀಮತಿ ಕುಮುದವಲ್ಲಿ ನಾಚ್ಚಿಯಾರ್ ಇಬ್ಬರೂ 11 ದೇವರಿಗೂ ಒಂದೇ ಸ್ಥಳದಲ್ಲಿ ಮಂಗಳಶಾಸನವನ್ನು ಮಾಡಿರುತ್ತಾರೆ.

ಮೂಲವರ್ : ನಾರಾಯಣ, ನಂದಾವಿಳಕ್ಕು

ಉತ್ಸವರ್ : ನಾರಾಯಣ, ಅಳತ್ತರ್ ಕರಿಯಾನ್ (ಕೊಡುವುದನ್ನು ಅಳತೆ ಮಾಡಲು ಸಾಧ್ಯವಾಗದು)

ತಾಯಾರ್ : ಪುಂಡರೀಕವಲ್ಲಿ

ತೀರ್ಥಂ : ಇಂದ್ರ ಪುಷ್ಕರಣಿ, ರುದ್ರ ಪುಷ್ಕರಣಿ

ವಿಮಾನಂ : ಪ್ರಣವಾಕೃತಿ

ಪ್ರತ್ಯಕ್ಷಗೊಂಡಿರುವುದು: ಇಂದ್ರ, ಏಕಾದಶ ರುದ್ರ

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್

# 33. ತಿರುವೈಕುಂಠ ವಿನ್ನಗರಂ

॥ ಓಂ ಶ್ರೀವೈಕುಂಠವಲ್ಲಿ ಸಮೇತ ಶ್ರೀವೈಕುಂಠನಾಥ ಸ್ವಾಮಿನೇ ನಮಃ ॥

ಈ ಕ್ಷೇತ್ರವು ತಿರುನಾಂಗೂರ್ 11 ಗರುಡ ಸೇವೆಯ ಸ್ಥಳ.

ಜನವರಿ ತಿಂಗಳು ಪುಷ್ಯ ಮಾಸ (ತೈ) ಅಮಾವಾಸ್ಯೆ ಮರುದಿನ ತಿರುನಾಂಗೂರಿನಲ್ಲಿ ನಡೆಯುವ ಗರುಡ ಸೇವೆಗೆ ಈ ದೇವರು ಪಾಲ್ಗೊಳ್ಳುವರು.

ಶಿವನ ರುದ್ರತಾಂಡವವನ್ನು ನಿಲ್ಲಿಸಲು ಶ್ರೀಹರಿಯು ಶಂಖಚಕ್ರಗಧಾಧಾರಿಯಾಗಿ ವೈಕುಂಠದಿಂದ ಈ ಸ್ಥಳಕ್ಕೆ ಬಂದು ಇಲ್ಲಿಯೇ ನೆಲಸುವನು.

ಮೂಲವರ್ : ವೈಕುಂಠನಾಥ
ಉತ್ಸವರ್ : ವೈಕುಂಠನಾಥನ್
ತಾಯಾರ್ : ವೈಕುಂಠವಲ್ಲಿ
ತೀರ್ಥಂ : ಲಕ್ಷ್ಮಿ ಪುಷ್ಕರಣಿ, ವೃಜಾ ತೀರ್ಥಂ, ಭುಜಂಗ ಪುಷ್ಕರಣಿ
ವಿಮಾನಂ : ಅನಂತ ಸತ್ಯವರ್ತಕ ವಿಮಾನಂ
ಪ್ರತ್ಯಕ್ಷಗೊಂಡಿರುವುದು: ಉಪರಿಶರವಸು, ಭುಜಂಗ ಮಹರ್ಷಿ

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್



# 34. ತಿರುವಾಳಿ ತಿರುನಗರ್

॥ ಓಂ ಶ್ರೀಅಮೃತಕಡವಲ್ಲಿ ಸಮೇತ ಶ್ರೀವಯಲಾಳಿಮನವಾಳ ಸ್ವಾಮಿನೇ ನಮಃ ॥

ಈ ಕ್ಷೇತ್ರವು ತಿರುನಾಂಗೂರ್ 11 ಗರುಡ ಸೇವೆಯ ಸ್ಥಳ.

ಜನವರಿ ತಿಂಗಳು ಪುಷ್ಯ ಮಾಸ (ತೈ) ಅಮಾವಾಸ್ಯೆ ಮರುದಿನ ತಿರುನಾಂಗೂರಿನಲ್ಲಿ ನಡೆಯುವ ಗರುಡ ಸೇವೆಗೆ ಈ ದೇವರು ಪಾಲ್ಗೊಳ್ಳುವರು.

ತಿರುಮಂಗೈ ಆಳ್ವಾರರು ಪೂಜಿಸಿದ ಸ್ಥಳ. ತಿರುಮಂಗೈ ಆಳ್ವಾರರಿಗೆ ಪ್ರತ್ಯೇಕ ದೇವಸ್ಥಾನ ಉಂಟು. ಈ ಊರಿನ ಪಕ್ಕದಲ್ಲಿರುವ ತಿರುಕ್ಕೊರೆಯಲೂರ್ ಆಳ್ವಾರರ ಜನ್ಮಸ್ಥಳ.

ತಿರುವಾಳಿ

ಮೂಲವರ್ : ಲಕ್ಷ್ಮೀ ನರಸಿಂಹ, ವಯಲಾಳಿ ಮನವಾಳರ್
ಉತ್ಸವರ್ : ತಿರುವಾಳಿ ನಗರಾಳನ್ (ತಿರುವಾಳಿ ನಗರದವ)
ತಾಯಾರ್ : ಅಮೃತಕಡವಲ್ಲಿ
ತೀರ್ಥಂ : ಲಕ್ಷಣ ಪುಷ್ಕರಣಿ
ವಿಮಾನಂ : ಅಷ್ಟಾಕ್ಷರ ವಿಮಾನಂ
ಪ್ರತ್ಯಕ್ಷಗೊಂಡಿರುವುದು : ತಿರುಮಂಗೈ ಆಳ್ವಾರ್

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್

ತಿರುನಗರಿ

ತಿರುಮಂಗೈ ಆಳ್ವಾರರು ತನ್ನದೇ ಬಿಂಬವನ್ನು ಬಂಗಾರದಲ್ಲಿ ವಿಗ್ರಹ ಮಾಡಿ ತನ್ನ ಶಕ್ತಿಯನ್ನೆಲ್ಲಾ ಅದಕ್ಕೆ ಧಾರೆ ಎರೆದು ವೈಕುಂಠವಾಸಿಯಾದರು.

ಮೂಲವರ್ : ವೇದರಾಜನ್
ಉತ್ಸವರ್ : ಕಲ್ಯಾಣ ರಂಗನಾಥನ್
ತಾಯಾರ್ : ಅಮೃತವಲ್ಲಿ
ವಿಮಾನಂ : ಅಷ್ಟಾಕ್ಷರ ವಿಮಾನಂ
ಪ್ರತ್ಯಕ್ಷಗೊಂಡಿರುವುದು : ತಿರುಮಂಗೈ ಆಳ್ವಾರ್

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್

# 35. ತಿರುದೇವನಾರ್ ತೊಗೈ

**॥ ಓಂ ಶ್ರೀಕಡಲ್‌ಮಗಳ್ ಸಮೇತ ಶ್ರೀದೈವನಾಯಕ ಸ್ವಾಮಿನೇ ನಮಃ ॥**

ಈ ಕ್ಷೇತ್ರವು ತಿರುನಾಂಗೂರ್ 11 ಗರುಡ ಸೇವೆಯ ಸ್ಥಳ.

ಜನವರಿ ತಿಂಗಳು ಪುಷ್ಯ ಮಾಸ (ತೈ) ಅಮಾವಾಸ್ಯೆ ಮರುದಿನ ತಿರುನಾಂಗೂರಿನಲ್ಲಿ ನಡೆಯುವ ಗರುಡ ಸೇವೆಗೆ ಈ ದೇವರು ಪಾಲ್ಗೊಳ್ಳುವರು.

ಈ ಸ್ಥಳದಲ್ಲಿ ಲೋಕಕಲ್ಯಾಣಕ್ಕಾಗಿ ಎಲ್ಲಾ ದೇವಾದಿ ದೇವರುಗಳು ಒಂದಾಗಿ ಸೇರಿ ಸಭೆ ನಡೆಸಿದರು. ಎಲ್ಲಾ ದೇವರುಗಳು ಒಂದಾಗಿ ಸೇರಿದ್ದರಿಂದ ಈ ಸ್ಥಳಕ್ಕೆ ತಿರುತ್ತೇವನಾರ್(ದೇವಾದಿ ದೇವರು) ತುಹೈ(ಸೇರಿರುವುದು) ತಿರುತ್ತೇವನಾರ್ ತುಹೈ ಎಂಬ ಹೆಸರು ಬಂದಿತು.

**ಮೂಲವರ್ : ದೈವನಾಯಕನ್**
**ಉತ್ಸವರ್ : ಮಾಧವ ಪೆರುಮಾಳ್,**
**ತಾಯಾರ್ : ಕಡಲ್‌ಮಗಳ್ ನಾಚ್ಚಿಯಾರ್, ಮಾಧವ ನಾಯಕಿ**
**ತೀರ್ಥಂ : ಶೋಭನ ತೀರ್ಥಂ, ದೇವಸಭ ಪುಷ್ಕರಣಿ**
**ವಿಮಾನಂ : ಶೋಭನ ವಿಮಾನಂ**
**ಪ್ರತ್ಯಕ್ಷಗೊಂಡಿರುವುದು : ವಸಿಷ್ಠ**

**ಮಂಗಳಶಾಸನ ಮಾಡಿರುವವರು :**

**1. ತಿರುಮಂಗೈಆಳ್ವಾರ್**



# 36. ತಿರುತ್ತೆಟ್ರಿಯಂಬಲಂ

॥ ಓಂ ಶ್ರೀಚೆಂಗಮಲವಲ್ಲಿ ಸಮೇತ ಶ್ರೀಚೆಂಗನ್‌ಮಾಲ್ ಸ್ವಾಮಿನೇ ನಮಃ ॥

ಈ ಕ್ಷೇತ್ರವು ತಿರುನಾಂಗೂರ್ 11 ಗರುಡ ಸೇವೆಯ ಸ್ಥಳ.

ಜನವರಿ ತಿಂಗಳು ಪುಷ್ಯ ಮಾಸ (ತೈ) ಅಮಾವಾಸ್ಯೆ ಮರುದಿನ ತಿರುನಾಂಗೂರಿನಲ್ಲಿ ನಡೆಯುವ ಗರುಡ ಸೇವೆಗೆ ಈ ದೇವರು ಪಾಲ್ಗೊಳ್ಳುವರು.

**ಮೂಲವರ್ : ಚೆಂಗನ್‌ಮಾಲ್, ರಂಗನಾಥನ್**

**ತಾಯಾರ್ : ಚೆಂಗಮಲವಲ್ಲಿ**

**ತೀರ್ಥಂ : ಸೂರ್ಯ ಪುಷ್ಕರಣಿ**

**ವಿಮಾನಂ : ವೇದ ವಿಮಾನಂ**

**ಪ್ರತ್ಯಕ್ಷಗೊಂಡಿರುವುದು : ನಾಚ್ಚಿಯಾರ್, ಅನಂತಾಳ್ವಾರ್**

**ಮಂಗಳಶಾಸನ ಮಾಡಿರುವವರು :**

**1. ತಿರುಮಂಗೈಆಳ್ವಾರ್**

# 37. ತಿರುಮಣಿಕ್ಕೂಡಂ

॥ ಓಂ ಶ್ರೀತಿರುಮಾಮಗಳ್ ಸಮೇತ ಶ್ರೀಮಣಿಕ್ಕೂಡನಾಯಕ ಸ್ವಾಮಿನೇ ನಮಃ ॥

ಈ ಕ್ಷೇತ್ರವು ತಿರುನಾಂಗೂರ್ 11 ಗರುಡ ಸೇವೆಯ ಸ್ಥಳ.

ಜನವರಿ ತಿಂಗಳು ಪುಷ್ಯ ಮಾಸ (ತೈ) ಅಮಾವಾಸ್ಯೆ ಮರುದಿನ ತಿರುನಾಂಗೂರಿನಲ್ಲಿ ನಡೆಯುವ ಗರುಡ ಸೇವೆಗೆ ಈ ದೇವರು ಪಾಲ್ಗೊಳ್ಳುವರು.

**ಮೂಲವರ್ : ವರದರಾಜ ಪೆರುಮಾಳ್, ಮಣಿಕ್ಕೂಡ ನಾಯಕನ್, ಗಜೇಂದ್ರ ವರದನ್**

**ತಾಯಾರ್ : ತಿರುಮಾಮಗಳ್ (ಶ್ರೀದೇವಿ), ಭೂದೇವಿ**

**ತೀರ್ಥಂ : ಚಂದ್ರ ಪುಷ್ಕರಣಿ**

**ವಿಮಾನಂ : ಕನಕ**

**ಪ್ರತ್ಯಕ್ಷಗೊಂಡಿರುವುದು : ಪೆರಿಯ ತಿರುವಡಿ, ಚಂದ್ರ**

**ಮಂಗಳಶಾಸನ ಮಾಡಿರುವವರು :**

**1. ತಿರುಮಂಗೈಆಳ್ವಾರ್**

# 38. ತಿರುವೆಲ್ಲಕುಳಂ (ಅಣ್ಣನ್ ಕೋಯಿಲ್)

**॥ ಓಂ ಶ್ರೀಭೂಮಾದೇವಿ ಸಮೇತ ಶ್ರೀಅಣ್ಣನ್‌ಪೆರುಮಾಳ್ ಸ್ವಾಮಿನೇ ನಮಃ ॥**

ಈ ಕ್ಷೇತ್ರವು ತಿರುನಾಂಗೂರ್ 11 ಗರುಡ ಸೇವೆಯ ಸ್ಥಳ.

ಜನವರಿ ತಿಂಗಳು ಪುಷ್ಯ ಮಾಸ (ತೈ) ಅಮಾವಾಸ್ಯೆ ಮರುದಿನ ತಿರುನಾಂಗೂರಿನಲ್ಲಿ ನಡೆಯುವ ಗರುಡ ಸೇವೆಗೆ ಈ ದೇವರು ಪಾಲ್ಗೊಳ್ಳುವರು.

ತಿರುಪತಿ ಶ್ರೀನಿವಾಸನ ಅಣ್ಣನಾಗಿರುವ ಈ ದೇವರ ದೇವಸ್ಥಾನವನ್ನು ಅಣ್ಣನ್ ಕೋಯಿಲ್ ಎಂದು ಕರೆಯುವರು. ತಿರುಪತಿಗೆ ಸಲ್ಲಿಸ ಬೇಕಾದ ಕಾಣಿಕೆಯನ್ನು ಇಲ್ಲಿಯೇ ಸಲ್ಲಿಸಬಹುದು. ಆದರೆ ಇಲ್ಲಿ ಸಲ್ಲಿಸಬೇಕಾಗಿರುವ ಕಾಣಿಕೆಯನ್ನು ಇಲ್ಲಿಯೇ ಸಲ್ಲಿಸಬೇಕು.

ಸ್ಥಳ ಪುರಾಣ : ಸೂರ್ಯವಂಶದಲ್ಲಿ ಹುಟ್ಟಿದ ದುಂದುಮಾರನ್ ಎಂಬ ರಾಜನ ಮಗ ಶ್ವೇತನ್ ನಿಗೆ 9 ವರ್ಷಕ್ಕೆ ಮೃತ್ಯು ಬರುವುದೆಂದು ತಿಳಿದು ಆತನು ಶ್ವೇತ ಪುಷ್ಕರಣಿಯಲ್ಲಿ ಸ್ನಾನ ಮಾಡಿ ಬಿಲ್ವ ಮರದ ಕೆಳಗೆ ಕುಳಿತು ತಪಸ್ಸು ಮಾಡಿ ಮೃತ್ಯುಂಜಯ ಮಂತ್ರ ಪಠನ ಮಾಡಿದಾಗ ದೇವರು ಪ್ರತ್ಯಕ್ಷವಾಗಿ ಮಾರ್ಕಂಡೇಯನ ರೀತಿ ದೀರ್ಘಾಯುವಾಗಿ ಬಾಳು ಎಂದು ಆಶೀರ್ವದಿಸಿದನು.

**ಮೂಲವರ್ : ಶ್ರೀನಿವಾಸನ್, ಕಣ್ಣನ್, ನಾರಾಯಣನ್, ಅಣ್ಣನ್ ಪೆರುಮಾಳ್**

**ತಾಯಾರ್ : ಅಲಮೇಲ್ ಮಂಗೈ, ಪದ್ಮಾವತಿ, ಭೂಮಾದೇವಿ**

**ತೀರ್ಥಂ : ಶ್ವೇತ ಪುಷ್ಕರಣಿ**

**ವಿಮಾನಂ : ತತ್ತ್ವದ್ಯೋತಕ**

**ಪ್ರತ್ಯಕ್ಷಗೊಂಡಿರುವುದು : ರುದ್ರ, ಶ್ವೇತ ರಾಜ**

**ಮಂಗಳಶಾಸನ ಮಾಡಿರುವವರು :**

**1. ತಿರುಮಂಗೈಆಳ್ವಾರ್**

# 39. ತಿರುಪಾರ್ಥನ್‌ಪಲ್ಲಿ

॥ ಓಂ ಶ್ರೀತಾಮರೈನಾಯಕಿ ಸಮೇತ ಶ್ರೀಕಣ್ಣನ್ ಸ್ವಾಮಿನೇ ನಮಃ ॥

ಈ ಕ್ಷೇತ್ರವು ತಿರುನಾಂಗೂರ್ 11 ಗರುಡ ಸೇವೆಯ ಸ್ಥಳ.

ಜನವರಿ ತಿಂಗಳು ಪುಷ್ಯ ಮಾಸ (ತೈ) ಅಮಾವಾಸ್ಯೆ ಮರುದಿನ ತಿರುನಾಂಗೂರಿನಲ್ಲಿ ನಡೆಯುವ ಗರುಡ ಸೇವೆಗೆ ಈ ದೇವರು ಪಾಲ್ಗೊಳ್ಳುವರು.

ಆರ್ಜುನನು ಈ ಸ್ಥಳಕ್ಕೆ ಬಂದಾಗ ತುಂಬಾ ದಾಹವಾಗಿತ್ತು. ಕುಡಿಯಲು ನೀರು ಕೊಡೆಂದು ಅಗಸ್ತ್ಯ ಮುನಿಗಳನ್ನು ಕೇಳಿದಾಗ ಅಗಸ್ತ್ಯ ಮುನಿಗಳು ತಮ್ಮ ಕಮಂಡಲವನ್ನು ನೋಡುತ್ತಾರೆ. ಆದರೆ ಕಮಂಡಲದಲ್ಲಿರುವ ನೀರು ಬತ್ತಿ ಹೋಗಿತ್ತು. ನೀರು ಬತ್ತಿಹೋಗಲು ಕಾರಣವೇನೆಂದು ಅಗಸ್ತ್ಯ ಮಹರ್ಷಿಯು ತಮ್ಮ ಜ್ಞಾನನೇತ್ರದಿಂದ ನೋಡಿದಾಗ ಇದು ಶ್ರೀ ಕೃಷ್ಣನ ಕೆಲಸವೆಂದು ತಿಳಿಯಿತು. ಆಗ ಅಗಸ್ತ್ಯರು 'ಅರ್ಜುನ, ನಿನಗೆ ಕುಡಿಯಲು ನೀರು ಬೇಕಾದಲ್ಲಿ ಆಪತ್ಭಾಂದವನಾದ ಶ್ರೀಕೃಷ್ಣನನ್ನೇ ಕೇಳು' ಎಂದರು. ಆಗ ಅರ್ಜುನನು ತಾನು ಮಾಡಿದ ತಪ್ಪನ್ನು ಒಪ್ಪಿಕೊಂಡು ಶ್ರೀಕೃಷ್ಣನನ್ನು ಬೇಡುತ್ತಾನೆ. ಆಗ ಕೃಷ್ಣನು ಅರ್ಜುನನ ಬಳಿ ಬಂದು ಖಡ್ಗವನ್ನು ನೀಡಿ ಭೂಮಿಯನ್ನು ಸೀಳು ಎಂದಾಗ ಅರ್ಜುನನು ಹಾಗೇ ಮಾಡುತ್ತಾನೆ. ಆಗ ಗಂಗೆಯು ಮೇಲೆ ಬಂದು ಅರ್ಜುನನ ದಾಹವನ್ನು ತೀರಿಸುತ್ತದೆ. ಆ ಸಮಯದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಸ್ವಲ್ಪ ಜ್ಞಾನೋಪದೇಶವನ್ನು ಮಾಡುತ್ತಾನೆ.

ಪಾರ್ಥನಿಗೋಸ್ಕರ (ಅರ್ಜುನ) ಶ್ರೀಕೃಷ್ಣನು ಬಂದಿದ್ದಕ್ಕಾಗಿ ಈ ದೇಗುಲದಲ್ಲಿ ಅರ್ಜುನನಿಗೂ ಒಂದು ದೇವಾಲಯವಿದೆ. ಈ ಕಾರಣದಿಂದ ಊರಿನ ಹೆಸರೂ ಸಹ ತಿರುಪಾರ್ಥನ್‌ಪಳ್ಳಿ ಎಂಬ ಹೆಸರಾಯಿತು.

ವರುಣನು ಈ ದೇವರ ಬಳಿ ಬಂದು ಬಹಳ ತಪಸ್ಸು ಮಾಡಿ ಪಾರ್ಥಸಾರಥಿಯಾಗಿ ದರ್ಶನ ನೀಡೆಂದು ಬೇಡಿದಾಗ ದೇವರು ಪಾರ್ಥಸಾರಥಿಯಾಗಿ ದರ್ಶನ ನೀಡಿದರು. ಆದಕಾರಣ ಊರಿನ ಹೆಸರೂ ಪಾರ್ಥನ್‌ಪಲ್ಲಿ, ದೇವರ ಹೆಸರು ಪಾರ್ಥಸಾರಥಿ.

ಮೂಲವರ್ : ಕಣ್ಣನ್, ಪಾರ್ಥಸಾರಥಿ
ಉತ್ಸವರ್ : ಪಾರ್ಥಸಾರಥಿ
ತಾಯಾರ್ : ತಾಮರೈ ನಾಯಕಿ
ತೀರ್ಥಂ : ಗಂಗಾ ತೀರ್ಥ
ವಿಮಾನಂ : ನಾರಾಯಣ
ಪ್ರತ್ಯಕ್ಷಗೊಂಡಿರುವುದು: ಅರ್ಜುನ, ವರುಣ, ಏಕಾದಶ ರುದ್ರ

ಮಂಗಳಶಾಸನ ಮಾಡಿರುವವರು : 1. ತಿರುಮಂಗೈಆಳ್ವಾರ್

# 40. ತಿರುಚಿತ್ರಕೂಟಂ (ಚಿದಂಬರಂ)

**॥ ಓಂ ಶ್ರೀಪುಂಡರೀಕವಲ್ಲಿ ಸಮೇತ ಶ್ರೀಗೋವಿಂದರಾಜ ಸ್ವಾಮಿನೇ ನಮಃ ॥**

ಇದು ಪ್ರಸಿದ್ಧವಾದ ಶಿವ ಮತ್ತು ವೈಷ್ಣವ ಕ್ಷೇತ್ರ. ನಟರಾಜನ ಸನ್ನಿಧಿ ಇದೆ. ನಟರಾಜನ ಸನ್ನಿಧಿಯ ಪಕ್ಕದಲ್ಲೇ ಗೋವಿಂದರಾಜ ದೇವರ ಸನ್ನಿಧಿಯಿದ್ದು, ಶ್ರೀವೈಷ್ಣವ ದಿವ್ಯ ದೇಶವೆನಿಸಿಕೊಂಡಿದೆ. ಇಲ್ಲಿ ನಟರಾಜನ ದೇಗುಲಕ್ಕೆ ಹಾಗೂ ಗೋವಿಂದರಾಜ ದೇವರ ದೇಗುಲಕ್ಕೆ ತೆರಳಲು ಪ್ರತ್ಯೇಕ ದಾರಿ ಮತ್ತು ಧ್ವಜಸ್ಥಂಬಗಳು ಇವೆ. ಅರ್ಚಕರೂ ಸಹ ಪ್ರತ್ಯೇಕವಾಗಿದ್ದಾರೆ.

ವೈಖಾನಸ ಆಗಮದಂತೆ ಪೂಜಾ ವಿಧಿಗಳು ನಡೆಯುತ್ತದೆ. ಈ ಕ್ಷೇತ್ರದಲ್ಲಿ ಬಹುವಾಗಿ ತಿಲ್ಲೈವೃಕ್ಷಗಳಿದ್ದದ್ದರಿಂದ ತಿಲ್ಲೈಚಿತ್ರಕೂಟವೆಂಬುದಾಗಿ ಹೆಸರು ಬಂದಿದೆ. ಉತ್ಸವಮೂರ್ತಿ ರಾಮನಂತಿರುವುದರಿಂದಲೂ ಸಹ ಚಿತ್ರಕೂಟವೆಂದು ಕರೆಯುತ್ತಾರೆ. ಕ್ಷೀರಾಬ್ಧಿಶಯನದಲ್ಲಿ ಇದ್ದ ಹಾಗೆ ಶಯನಿಸಿದ್ದು, ನಟರಾಜನ ನಾಟ್ಯವನ್ನು ನೋಡಿ ಆನಂದಿಸುತ್ತಿರುವಂತಿದೆ.

ಇಲ್ಲಿನ ಮತ್ತೊಂದು ವಿಶೇಷವೆಂದರೆ ಒಂದೇ ಸ್ಥಳದಲ್ಲಿ ನಿಂತು ನಟರಾಜನ ಹಾಗೂ ಗೋವಿಂದರಾಜನ ದರ್ಶನ ಮಾಡಬಹುದು.

ಮೂಲವರ್ : ಗೋವಿಂದರಾಜನ್

ಉತ್ಸವರ್ : ದೇವಾದಿದೇವನ್, ಪಾರ್ಥಸಾರಥಿ

ತಾಯಾರ್ : ಪುಂಡರೀಕವಲ್ಲಿ

ತೀರ್ಥಂ : ಪುಂಡರೀಕ ಪುಷ್ಕರಣಿ

ವಿಮಾನಂ : ಸಾತ್ವಿಕ ವಿಮಾನ

ಪ್ರತ್ಯಕ್ಷಗೊಂಡಿರುವುದು: ತಿಲ್ಲೈ ನಾಗರೀಕರು, ಕಣ್ವ ಮಹರ್ಷಿ, ಪತಂಜಲಿ ಮಹರ್ಷಿ, ವ್ಯಾಘ್ರ ಪಾದರ್

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್, 2. ಕುಲಶೇಖರ ಆಳ್ವಾರ್.

ಚೋಳನಾಡು ದಿವ್ಯದೇಶಗಳು ಸಮಾಪ್ತಿ

# ನಡುನಾಡು (ಮಧ್ಯನಾಡು) ದಿವ್ಯದೇಶಗಳು

## 41. ತಿರುವಹಿಂದ್ರಪುರಂ

**॥ ಓಂ ಶ್ರೀಹೇಮಾಂಬುಜವಲ್ಲಿ ಸಮೇತ ಶ್ರೀದೈವನಾಯಕನ್ ಸ್ವಾಮಿನೇ ನಮಃ ॥**

ಚೆನ್ನೈನಿಂದ ತಿರುಚಿಗೆ ಹೋಗುವ ಮಾರ್ಗದಲ್ಲಿ ಕಡಲೂರು ಇದೆ. ಈ ಊರಿನ ಬಳಿ ತಿರುವಹೀಂದ್ರಪುರಂ ಇದೆ. ಎಲ್ಲಾ ಅನುಕೂಲಗಳೂ ಇವೆ. ತಿರುವಹೀಂದ್ರಪುರದಲ್ಲಿ ದೇವಸ್ಥಾನದ ಛತ್ರಗಳಿವೆ. ವಸತಿ ಸೌಲಭ್ಯ ದೊರಕುವುದು.

ಈ ದಿವ್ಯದೇಶವು ಶ್ರೀ ವೇದಾಂತ ದೇಶಿಕರ ದಿವ್ಯ ಚರಿತ್ರೆಯೊಡನೆ ಸಂಬಂಧ ಹೊಂದಿದ್ದು ಅವರು ತಪಸ್ಸು ಮಾಡಿ, ಹಯಗ್ರೀವ ಹಾಗೂ ಗರುಡ ದೇವರ ಸಾಕ್ಷಾತ್ಕಾರ ಪಡೆದ ಸ್ಥಳವಾಗಿದ್ದು ಸ್ವಾಮಿ ದೇಶಿಕರ ಅನುಯಾಯಿಗಳಿಗೆಲ್ಲಾ ಅತ್ಯಂತ ಮಹತ್ವದ ಕ್ಷೇತ್ರವಾಗಿದೆ. ಮುಖ್ಯ ದೇವಸ್ಥಾನದ ಎದುರಿನಲ್ಲೇ "ಓಷಧ ಗಿರಿ" ಎಂಬ ಸಣ್ಣ ಗುಡ್ಡವಿದ್ದು ಅಲ್ಲಿ ಶ್ರೀ ಹಯಗ್ರೀವರ ದೇವಸ್ಥಾನವಿದೆ. ಗರ್ಭಗುಡಿಯಲ್ಲಿ ಶ್ರೀ ಗರುಡ ದೇವರ ವಿಗ್ರಹವೂ ಇದೆ. ಈ ಪರ್ವತದ ಮೇಲೆಯೇ ಶ್ರೀ ದೇಶಿಕರು ತಪಸ್ಸು ಮಾಡಿ ಗರುಡದೇವರು ಹಾಗೂ ಹಯಗ್ರೀವ ದೇವರಿಂದ ಉಪದೇಶ ಪಡೆದರು.

ಹಯಗ್ರೀವ ದೇವಸ್ಥಾನದಲ್ಲಿ ಪುಸ್ತಕ, ಲೇಖನಿ, ಜೇನುತುಪ್ಪ ತೆಗೆದುಕೊಂಡು ಹೋಗಿ ಪೂಜೆ ಮಾಡಿಸಿ ಮನೆಗೆ ತೆಗೆದುಕೊಂಡು ಬಂದು ಮಕ್ಕಳಿಗೆ ಕೊಟ್ಟರೆ ಮಕ್ಕಳು ಚೆನ್ನಾಗಿ ಓದುತ್ತಾರೆ.

ದೇಶಿಕರು ವಾಸಿಸುತ್ತಿದ್ದ(ದೇಶಿಕನ್ ತಿರುಮಾಳಿಗೈ ಎಂದು ಕರೆಯುತ್ತಾರೆ) ಮನೆ ಹಾಗೂ ಅವರೇ ಕಟ್ಟಿದರೆನ್ನಲಾದ ಬಾವಿಯೂ ಸಹ ಈಗಲೂ ಇವೆ. ಶ್ರೀವೇದಾಂತ ದೇಶಿಕರ ಸನ್ನಿಧಿಯು ದೇವಸ್ಥಾನದ ಒಳಗೆ ದೊಡ್ಡದಾಗಿದ್ದು. ಶ್ರೀ ವೇದಾಂತ ದೇಶಿಕರನ್ನು ಸಾಕ್ಷಾತ್ ಭಗವಂತನ ಸ್ವರೂಪ ಹಾಗೂ ಆಚಾರ್ಯರೆಂದು ಪೂಜಿಸಲಾಗುತ್ತಿದೆ. ಅನೇಕ ಉತ್ಸವಗಳು ವರ್ಷ ಪೂರ್ತಿ ನಡೆಯುವುದಲ್ಲದೆ, ಶ್ರೀ ದೇಶಿಕರ ತಿರುನಕ್ಷತ್ರ ಉತ್ಸವವು ಬಹಳ ವಿಜೃಂಭಣೆಯಿಂದ ನಡೆಯುವುದು. ಹಿಂದೆ "ಶ್ರೀ ದೇಶಿಕನ್ ಶಾತ್ತು ಮೊರೈ" ದಿನ ಜಿಲ್ಲೆಯಲ್ಲಿ ರಜಾ ಘೋಷಿಸುತ್ತಿದ್ದರಂತೆ.

ದೇವನಾಯಕನ ಉತ್ಸವ ಮೂರ್ತಿಯು ಬಹಳ ಸುಂದರವಾಗಿದ್ದು, ಅದ್ಭುತವಾದ ವರ್ಚಸ್ಸಿನಿಂದ ಕೂಡಿದೆ. ತ್ರಿಮೂರ್ತಿ ದೇವರುಗಳಾದ ಬ್ರಹ್ಮ ವಿಷ್ಣು ರುದ್ರರ ಚಿಹ್ನೆಗಳನ್ನು ಉತ್ಸವ ಮೂರ್ತಿಯಲ್ಲಿ ಕಾಣಬಹುದು. (ಕೈಯಲ್ಲಿನ ಕಮಲದ

ಹೂವು ಬ್ರಹ್ಮನನ್ನು ಹಣೆಯಲ್ಲಿ ಕಣ್ಣು ತ್ರಿನೇತ್ರನನ್ನು, ಶಂಖಚಕ್ರಗಳು ವಿಷ್ಣುವನ್ನೂ ಪ್ರತಿಬಿಂಬಿಸುತ್ತವೆ.)

ದೇಶಿಕರು ತನ್ನದೇ ಆದ ವಿಗ್ರಹವನ್ನು ತನ್ನ ಕೈಯಾರೆ ಸಿದ್ಧಮಾಡಿ ಗೆದ್ದರು. ಈ ವಿಗ್ರಹವು ಈಗಲೂ ದೇವಾಲಯದಲ್ಲಿದೆ.

ಒಮ್ಮೆ ನಾರಾಯಣನಿಗೆ ನೀರಿನ ದಾಹವಾದಾಗ ಆದಿಶೇಷನು ತನ್ನ ಬಾಲದಿಂದಲೇ ಭೂಮಿಯನ್ನು ಒಡೆದು ನೀರನ್ನು ಕೊಟ್ಟನು. ಈಗಲೂ ಆ ಬಾವಿ ಅಲ್ಲಿಯೇ ಇದೆ. ಆ ಬಾವಿಯ ಹೆಸರು ಶೇಷ ತೀರ್ಥಂ. ಇಂದಿಗೂ ಅಲ್ಲಿನ ದೇವರಿಗೆ ಇಲ್ಲಿನ ತೀರ್ಥದಿಂದಲೇ ಅಭಿಷೇಕವಾಗುವುದು.

ನೀರಿನ ದಾಹವನ್ನು ತೀರಿಸಲು ಗರುಡನು ಆಕಾಶ ಮಾರ್ಗವಾಗಿ ಹೋದನು. ಆಗ ಒಬ್ಬ ಮಹರ್ಷಿ ತನ್ನ ಕಮಂಡಲದಲ್ಲಿ ವಿರಜಾ ತೀರ್ಥವನ್ನು ಇಟ್ಟುಕೊಂಡಿರುವುದನ್ನು ಕಂಡು ಗರುಡನು ಆ ಕಮಂಡಲವನ್ನು ಕೆಳಗೆ ತಳ್ಳಿದನು. ಆಗ ಆ ತಳ್ಳಿದ ನೀರು ನದಿಯಾಗಿ ಹರಿಯಿತು. ಆಗ ಕೋಪಗೊಂಡ ಮಹರ್ಷಿ ಈ ನೀರು ಕೊಳಕಾಗಲಿ ಎಂದು ಶಾಪವಿತ್ತನು. ಗರುಡನು ಅದನ್ನು ಕೇಳಿ 'ನಾರಾಯಣನ ದಾಹವನ್ನು ಇಂಗಿಸಲು ನಾನು ಈ ಕೆಲಸ ಮಾಡಿದೆ.' ಎಂದನು. ಅದನ್ನು ಕೇಳಿದ ಮಹರ್ಷಿ 'ನನ್ನ ಕಾರ್ಯಕ್ಕೆ ಕ್ಷಮೆಯಿರಲಿ' ಎಂದು ಹೇಳಿ ಕಲುಷಿತವಾಗಿರುವ ನೀರು ತಿಳಿಯಾಗಲಿ ಎಂದು ಮತ್ತೊಮ್ಮೆ ತಾನಿಟ್ಟ ಶಾಪವನ್ನು ಹಿಂದಕ್ಕೆ ಪಡೆದನು. ನಾರಾಯಣನು ಆ ನೀರನ್ನೂ ಕುಡಿದನು. ಈಗಲೂ ಈ ಸ್ಥಳದಲ್ಲಿರುವ ಕೊಳದಲ್ಲಿ ನೀರು ಕಲುಷಿತವಾಗಿ ಕಂಡರೂ ಕೈಯಲ್ಲಿ ತೆಗೆದುಕೊಂಡಾಗ ಶುದ್ಧವಾದ ನೀರು ಬರುತ್ತದೆ. ಈ ತೀರ್ಥದ ಹೆಸರು ವಿರಜಾ ತೀರ್ಥ.

ಮೂಲವರ್ : ದೈವ ನಾಯಕನ್

ಉತ್ಸವರ್ : ದೇವನಾಥನ್

ತಾಯಾರ್ : ಹೇಮಾಂಬುಜವಲ್ಲಿ

ತೀರ್ಥಂ : ಗರುಡ ನದಿ (ವಿರಜಾ ತೀರ್ಥ), ಚಂದ್ರ ತೀರ್ಥಂ, ಶೇಷ ತೀರ್ಥಂ

ವಿಮಾನಂ : ಚಂದ್ರ ವಿಮಾನಂ, ಶುದ್ಧಸ್ತವ

ಪ್ರತ್ಯಕ್ಷಗೊಂಡಿರುವುದು : ಚಂದ್ರ, ಗರುಡ

ಮಂಗಳಶಾಸನ ಮಾಡಿರುವವರು : 1. ತಿರುಮಂಗೈಆಳ್ವಾರ್

# 42. ತಿರುಕೋವಿಲೂರ್

॥ ಓಂ ಶ್ರೀಗಜಲಕ್ಷ್ಮಿ ಸಮೇತ ಶ್ರೀತ್ರಿವಿಕ್ರಮ ಸ್ವಾಮಿನೇ ನಮಃ ॥

ತಿರುವಣ್ಣಾಮಲೈಯಿಂದ 25ಕಿ.ಮೀ. ದೂರದಲ್ಲಿದೆ. ಕಾಟ್‌ಪಾಡಿ ಮತ್ತು ವಿಳ್ಳುಪುರಂನ ನಡುವೆ ತಿರುಕ್ಕೋವಲೂರ್ ರೈಲ್ವೆ ಸ್ಟೇಷನ್ ಇದೆ. ತಿರುವಣ್ಣಾಮಲೈ ಹಾಗೂ ಕಾಟ್‌ಪಾಡಿಯಿಂದ ಬಸ್ ಅನುಕೂಲಗಳೂ ಚೆನ್ನಾಗಿದೆ. ತಿರುಕ್ಕೋವಲೂರ್ ದೊಡ್ಡ ಊರಾಗಿದ್ದು ಎಲ್ಲಾ ಸೌಲಭ್ಯಗಳೂ ಇವೆ.

ತ್ರಿವಿಕ್ರಮ (ವಾಮನ)ನ ಅವತಾರ ಮಾಡಿದ ಸ್ಥಳ. ಸ್ವಾಮಿಯು ಬಲ ಕಾಲನ್ನು ಮೇಲಕ್ಕೆ ಎತ್ತಿ ಆಕಾಶವನ್ನು ಅಳೆಯುತ್ತಿರುವ ದಿವ್ಯವಾದ ಸೇವೆ. ಪಾದದ ಹತ್ತಿರ ಬಲಿ ಚಕ್ರವರ್ತಿಯ ವಿಗ್ರಹವಿದೆ. ಇತರ ಕಡೆಗಳಲ್ಲಿ ಸಾಮಾನ್ಯವಾಗಿ ಎಡದಕಾಲನ್ನು ಮೇಲಕ್ಕೆ ಎತ್ತಿರುವ ಮೂರ್ತಿಗಳಿವೆ. ಇದಲ್ಲದೆ ಬಲದ ಕೈಯಲ್ಲಿ ಶಂಖ ಮತ್ತು ಎಡದ ಕೈಯಲ್ಲಿ ಚಕ್ರವನ್ನು ಧರಿಸಿದ್ದಾರೆ.

ಬಲಿಯನ್ನು ಅನುಗ್ರಹಿಸುವುದಕ್ಕೋಸಕ್ಕರ ಚಕ್ರವನ್ನು ಎಡಗೈನಲ್ಲಿ ಧರಿಸಿರುವುದಾಗಿ ಹಿರಿಯರ ಅಭಿಮತ.

ದೇವಸ್ಥಾನದ ಒಳಗಡೆ, ಅಂದರೆ ಮೂಲಸ್ಥಾನದ ಎಡಭಾಗದಲ್ಲಿ ದುರ್ಗಾದೇವಿಗೆ ಒಂದು ಸನ್ನಿಧಿಯೂ ಇದೆ. ಪ್ರತಿನಿತ್ಯ ದುರ್ಗಾದೇವಿಗೂ ಪೂಜೆ ಉಂಟು. ಶ್ರೀವೈಷ್ಣವ ದೇವಸ್ಥಾನಗಳಲ್ಲಿ ಇದು ಒಂದು ಅಪರೂಪ.

ಮೂಲವರ್ : ತ್ರಿವಿಕ್ರಮ (ವಾಮನ)
ಉತ್ಸವರ್ : ಗೋಪಾಲನ್
ತಾಯಾರ್ : ಗಜಲಕ್ಷ್ಮಿ
ತೀರ್ಥಂ : ಪೆನ್ನೈಯಾರು ಕೃಷ್ಣ ತೀರ್ಥಂ, ಚಕ್ರ ತೀರ್ಥಂ
ವಿಮಾನಂ : ಶ್ರೀಕರ ಸುರ ವಿಮಾನಂ

ಪ್ರತ್ಯಕ್ಷಗೊಂಡಿರುವುದು: ಬಲಿಚಕ್ರವರ್ತಿ, ಬೃಗು ಮಹರ್ಷಿ, ಬ್ರಹ್ಮ, ಇಂದ್ರ, ಋಷಿ, ಶೌನಕ ಮಹರ್ಷಿ, ಕಶ್ಯಪ, ಕಾಲವರ್

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್, 2. ಪೊಯ್‌ಗೈ ಆಳ್ವಾರ್, 3. ಮೂದತ್ತಾಳ್ವಾರ್

**ನಡುನಾಡು ದಿವ್ಯ ದೇಶಗಳು ಸಮಾಪ್ತಿ**

# ತೊಂಡನಾಡಿನ ದಿವ್ಯಕ್ಷೇತ್ರಗಳು (22)

## 43. ತಿರುಕಚ್ಚಿ (ಅತ್ತಿಗಿರಿ)

॥ ಓಂ ಶ್ರೀಪೆರುಂದೇವಿ ಸಮೇತ ಶ್ರೀವರದರಾಜ ಸ್ವಾಮಿನೇ ನಮಃ ॥

ಈ ಕ್ಷೇತ್ರಕ್ಕೆ ಸತ್ಯವ್ರತವೆಂದು ಹೆಸರು. ಬ್ರಹ್ಮನು ಅಶ್ವಮೇಧ ಯಜ್ಞವನ್ನು ನಡೆಸಿದ ಕ್ಷೇತ್ರ ಇದು. ಯಜ್ಞಕುಂಡದಿಂದ ವರದರಾಜ ದೇವರು ಪ್ರತ್ಯಕ್ಷವಾಗಿ ಬ್ರಹ್ಮನ ಪ್ರಾರ್ಥನೆಯಂತೆ ಇಲ್ಲೇ ತಾನು ನೆಲೆಸುವುದಾಗಿ ಹೇಳಿ ಅರ್ಚಾಮೂರ್ತಿಯಾಗಿ ದರ್ಶನಕೊಡುತ್ತಿದ್ದಾನೆ. ಹಸ್ತ ನಕ್ಷತ್ರವು ವರದರಾಜರ ಜನ್ಮ ನಕ್ಷತ್ರ ಚೈತ್ರಶುಕ್ಲ ಚತುರ್ದಶಿಯಂದು ಅವಿರ್ಭಾವವಾದುದಾಗಿ ಚರಿತ್ರೆ ಇದೆ.

ಇದು ವರದರಾಜ ಪೆರುಮಾಳ್ ದೇವಸ್ಥಾನ. ಒಂದು ಸಣ್ಣಗುಡ್ಡದ ಮೇಲೆ ದೇವಸ್ಥಾನವಿರುವುದರಿಂದ ಅತ್ತಿಗಿರಿ ಎಂದು ಕರೆಯುತ್ತಾರೆ. ಮೂಲಸ್ಥಾನಕ್ಕೆ ಹೋಗ ಬೇಕಾದರೆ ದೇವಸ್ಥಾನದ ಒಳಗೆ ಮೆಟ್ಟಿಲುಗಳನ್ನು ಹತ್ತಿ ಹೋಗಬೇಕು. (24 ಮೆಟ್ಟಿಲುಗಳಿದ್ದು ಗಾಯಿತ್ರಿ ಮಂತ್ರದ ಪ್ರತೀಕದಂತಿದೆ). ವರದರಾಜರ ಸನ್ನಿಧಿಯ ಕೆಳಗೆ ಸಣ್ಣ ಗುಹೆಯಲ್ಲಿ ಶ್ರೀಯೋಗಾನರಸಿಂಹ ಸನ್ನಿಧಿಯಿದೆ. ದೇವಸ್ಥಾನವು ಬಹಳ ದೊಡ್ಡದಾಗಿದ್ದು ಉತ್ಸವಗಳು ನಡೆಯಲು ಅನುಕೂಲವಾಗಿದೆ.

ದೇವಸ್ಥಾನದಲ್ಲಿರುವ ಅನಂತ ಸರಸ್ಸಿನಲ್ಲಿ ಅತ್ತಿಮರದಲ್ಲಿ ಮಾಡಿರುವ ಮೂಲ ದೇವರ ವಿಗ್ರಹವನ್ನು ಇಡಲಾಗಿದ್ದು, ಅದನ್ನು 40 ವರ್ಷಗಳಿಗೊಮ್ಮೆ ಮೇಲಕ್ಕೆ ತಂದು 10 ದಿವಸಗಳ ಉತ್ಸವ ನಡೆಸುತ್ತಾರೆ. ಇವರಿಗೆ 'ಅತ್ತಿವರದನ್' ಎಂದು ಹೆಸರು. ಇತ್ತೀಚೆಗೆ ಈ ಉತ್ಸವ ನಡೆಯಿತು. 1854, 1892, 1937, 1979, 2019ರಲ್ಲಿ ಈ ಉತ್ಸವ ನಡೆದಿತ್ತು ಮತ್ತೆ 2059ರಲ್ಲಿ ನಡೆಯುತ್ತದೆ.

ಶ್ರೀ ವೇದಾಂತ ದೇಶಿಕರ ಸನ್ನಿಧಿಯು ಧ್ವಜಸ್ತಂಭದ ಬಲಕ್ಕಿದೆ. ಬೇರೆ ಎಲ್ಲಾ ಆಚಾರ್ಯರುಗಳ ಹಾಗೂ ಆಳ್ವಾರರುಗಳ ಸನ್ನಿಧಿಗಳು ಸಹ ದೇವಸ್ಥಾನದ ಮೊದಲನೆಯ ಪ್ರಾಕಾರದಲ್ಲಿದ್ದು, ಅದನ್ನು ಆಳ್ವಾರ್ ತಿರುವೀಧಿ ಎಂದೇ ಕರೆಯುತ್ತಾರೆ.

ಈ ದೇವಸ್ಥಾನದಲ್ಲಿರುವ ದೇವರು ವರದರಾಜನ್ ಅಂದರೆ ವರವನ್ನು ಕೊಡುವುದರಲ್ಲಿ ಮಹಾರಾಜ.

ಮೂಲವರ್ : ಶ್ರೀ ವರದರಾಜನ್

ತಾಯಾರ್ : ಪೆರುಂದೇವಿ, ಮಹಾದೇವಿ

ತೀರ್ಥಂ : ವೇದವತಿ, ಅನಂತಸರಸ್, ಶೇಷ, ವರಾಹ, ಬ್ರಹ್ಮ, ಪದ್ಮ, ಅಗ್ನಿ, ಕುಶಲ ತೀರ್ಥಗಳು

ವಿಮಾನಂ : ಪುಣ್ಯಕೋಟಿ ವಿಮಾನಂ

ಪ್ರತ್ಯಕ್ಷಗೊಂಡಿರುವುದು : ಬ್ರಹ್ಮ, ಬೃಗು ಮುನಿ, ನಾರದ, ಗಜೇಂದ್ರ, ಇಂದ್ರ ಸರಸ್ವತಿ

ಮಂಗಳಶಾಸನ ಮಾಡಿರುವವರು :

1.ತಿರುಮಂಗೈಆಳ್ವಾರ್, 2. ಬೂದತ್ತಾಳ್ವಾರ್, 3. ಪೇಯ್ ಆಳ್ವಾರ್

# 44. ತಿರು ಅಷ್ಟಭುಜಗರಮ್

॥ ಓಂ ಶ್ರೀಅಲಮೇಲುಮಂಗ ಸಮೇತ ಶ್ರೀಆದಿಕೇಶವ ಸ್ವಾಮಿನೇ ನಮಃ ॥

ಚಿಕ್ಕ ಕಾಂಚೀಪುರದಲ್ಲಿ ಶ್ರೀವರದರಾಜದೇವರ ಸನ್ನಿಧಿಯಿಂದ 1ಕಿ.ಮೀ. ದೂರದಲ್ಲಿದೆ. ಮೂಲದೇವರಿಗೆ ಎಂಟು ಕೈಗಳಿರುವುದರಿಂದ ಅಷ್ಟಭುಜನೆಂದು ಹೆಸರು. ಶಂಖ, ಚಕ್ರ ಕಮಲ, ಕತ್ತಿ, ಬಿಲ್ಲು, ಬಾಣ ಮತ್ತು ಗದೆ ಇವು ಪರಮಾತ್ಮನು ಧರಿಸಿರುವ ಆಯುಧಗಳು.

ಮೂಲವರ್ : ಆದಿಕೇಶವ ಪೆರುಮಾಳ್, ಅಷ್ಟಭುಜ ಪೆರುಮಾಳ್, ಗಜೇಂದ್ರ ವರದನ್

ತಾಯಾರ್ : ಅಲುಮೇಲು ಮಂಗ, ಪದ್ಮಾಸಿನಿ, ಪುಷ್ಪವಲ್ಲಿ

ತೀರ್ಥಂ : ಗಜೇಂದ್ರ ತೀರ್ಥಂ

ವಿಮಾನಂ : ಕಘನಾಕೃತಿ, ಚಕ್ರಾಕೃತಿ

ಪ್ರತ್ಯಕ್ಷಗೊಂಡಿರುವುದು: ಗಜೇಂದ್ರ

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್, 2. ಪೇಯ್ ಆಳ್ವಾರ್.

# 45. ತಿರುತಂಗ (ದೀಪ ಪ್ರಕಾಶರ್)

॥ ಓಂ ಶ್ರೀಮರಗದವಲ್ಲಿ ಸಮೇತ ಶ್ರೀದೀಪಪ್ರಕಾಶ ಸ್ವಾಮಿನೇ ನಮಃ ॥

ಇದು ಚಿಕ್ಕ ಕಾಂಚೀಪುರದಲ್ಲಿ ಅಷ್ಟಭುಜದೇವರ ಸನ್ನಿಧಿಯಿಂದ 1ಕಿ.ಮೀ. ದೂರದಲ್ಲಿದೆ ಸ್ವಾಮಿ ವೇದಾಂತ ದೇಶಿಕರ ಜನ್ಮ ಸ್ಥಳವಾದ ತೂಪ್ಪುಲ್ ಎಂಬ ಪ್ರದೇಶವೂ ಸಹ ಇದಾಗಿದ್ದು ಶ್ರೀವೇದಾಂತ ದೇಶಿಕರ ದೊಡ್ಡ ದೇವಸ್ಥಾನವೂ ಸಹ ಪಕ್ಕದಲ್ಲಿದೆ.

ಈ ಸ್ಥಳದಲ್ಲಿ ಬ್ರಹ್ಮದೇವನು ಯಾಗ ಮಾಡುವಾಗ ರಾಕ್ಷಸರು ಪ್ರಪಂಚವನ್ನೇ ಕತ್ತಲು ಮಾಡಿ ಯಾಗ ಮಾಡಲು ತೊಂದರೆ ಕೊಟ್ಟರು. ಆ ಸಮಯದಲ್ಲಿ ಈ ದೇವರು ದೀಪ ರೂಪದಲ್ಲಿ ಬೆಳಗಿ ಯಾಗವನ್ನು ಸಮಾಪ್ತಿಗೊಳಿಸಿದರು. ಆದ್ದರಿಂದ ಈ ದೇವರಿಗೆ ದೀಪ ಪ್ರಕಾಶರ್ ಅಥವಾ ವಿಳಕ್ಕೊಳಿ ಪೆರುಮಾಳ್ ಎಂಬ ಹೆಸರು ಬಂದಿತು.

ಮೂಲವರ್ : ದಿವ್ಯ ಪ್ರಕಾಶರ್, ದೀಪ ಪ್ರಕಾಶರ್

ತಾಯಾರ್ : ಮರಗದವಲ್ಲಿ

ತೀರ್ಥಂ : ಸರಸ್ವತಿ ತೀರ್ಥಂ

ವಿಮಾನಂ : ಶ್ರೀಕಾರ ವಿಮಾನಂ

ಪ್ರತ್ಯಕ್ಷಗೊಂಡಿರುವುದು : ಸರಸ್ವತಿ

ಮಂಗಳಶಾಸನ ಮಾಡಿರುವವರು : 1. ತಿರುಮಂಗೈಆಳ್ವಾರ್

## 46. ತಿರುವೇಲುಕ್ಕೈ

॥ ಓಂ ಶ್ರೀವೇಲುಕ್ಕೈವಲ್ಲಿ ಸಮೇತ ಶ್ರೀಮುಕುಂದನಾಯಕ ಸ್ವಾಮಿನೇ ನಮಃ ॥

ದೀಪಪ್ರಕಾಶ ಸನ್ನಿಧಿಯಿಂದ ಅರ್ಧ ಕಿ.ಮೀ. ದೂರದಲ್ಲಿದೆ. ಇತ್ತೀಚೆಗೆ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿದ್ದಾರೆ. ಶ್ರೀವೇದಾಂತ ದೇಶಿಕರು "ಕಾಮಾಸಿಕಾಷ್ಟಕ" ಎಂಬ ಸ್ತೋತ್ರವನ್ನು ಈ ದೇವರ ಮೇಲೆ ರಚಿಸಿದ್ದಾರೆ.

ವೇಳ್ ಎಂದರೆ ಆಸೆ. ನರಸಿಂಹ ದೇವರು ಆಸೆಯಿಂದ ಈ ಊರಲ್ಲಿ ನೆಲಸಿರುವುದರಿಂದ ತಿರುವೇಳುಕ್ಕೈ ಎಂಬ ಹೆಸರು ಬಂದಿತು. ನರಸಿಂಹ ಅವತಾರದ ಸಮಯದಲ್ಲಿ ಅಲ್ಲಿರುವ ರಾಕ್ಷಸರನ್ನೆಲ್ಲಾ ತನ್ನ ಇನ್ನೊಂದು ರೂಪದಲ್ಲಿ ಓಡಿಸಿಕೊಂಡು ಬಂದು ಇಲ್ಲಿಯೇ ನೆಲಸುತ್ತಾನೆ.

**ಮೂಲವರ್ : ಮುಕುಂದ ನಾಯಕ, ಅಳಗಿಯ ಸಿಂಗರ್ (ಸುಂದರವಾದ ನರಸಿಂಹ)**

**ತಾಯಾರ್ : ವೇಲುಕ್ಕೈವಲ್ಲಿ, ಅಮೃತವಲ್ಲಿ**

**ತೀರ್ಥಂ : ಕನಕ ಸರಸ್, ಹೇಮ ಸರಸ್, ಪ್ರಹ್ಲಾದ ತೀರ್ಥ**

**ವಿಮಾನಂ : ಕನಕ ವಿಮಾನಂ**

**ಪ್ರತ್ಯಕ್ಷಗೊಂಡಿರುವುದು : ಬೃಗು ಮುನಿ**

**ಮಂಗಳಶಾಸನ ಮಾಡಿರುವವರು :**

**1. ತಿರುಮಂಗೈಆಳ್ವಾರ್, 2. ಪೇಯ್ ಆಳ್ವಾರ್**

## 47. ತಿರುನೀರಕಂ

॥ ಓಂ ಶ್ರೀನೀಲಮಂಗೈವಲ್ಲಿ ಸಮೇತ ಶ್ರೀಜಗದೀಶ್ವರ ಸ್ವಾಮಿನೇ ನಮಃ ॥

ಈ ಸನ್ನಿಧಿಯು ಉಳಗಳಂದ ಪೆರುಮಾಳ್ ಸನ್ನಿಧಿಯಲ್ಲಿ ನಾಲ್ಕು ದಿವ್ಯ ದೇವಸ್ಥಾನಗಳು ಇದೆ.

**ಮೂಲವರ್ : ಜಗದೀಶ್ವರ**

**ತಾಯಾರ್ : ನೀಲಮಂಗೈವಳ್ಳಿ (ಭೂಮಾ ದೇವಿ)**

**ತೀರ್ಥಂ : ಅಕ್ರೂರ ತೀರ್ಥ**

**ವಿಮಾನಂ : ಜಗದೀಶ್ವರ**

**ಪ್ರತ್ಯಕ್ಷಗೊಂಡಿರುವುದು : ಅಕ್ರೂರ**

**ಮಂಗಳಶಾಸನ ಮಾಡಿರುವವರು :**

**1. ತಿರುಮಂಗೈಆಳ್ವಾರ್**

## 48. ತಿರುಪಾಡಗಂ (ಪಾಂಡವದೂತರ್ ಕೋಯಿಲ್)

॥ ಓಂ ಶ್ರೀರುಕ್ಮಿಣಿ ಸಮೇತ ಶ್ರೀಪಾಂಡವದೂತ ಸ್ವಾಮಿನೇ ನಮಃ ॥

ಪೆರಿಯ ಕಾಂಚೀಪುರದಲ್ಲಿ, ರೈಲ್ವೆಸ್ಟೇಷನ್‌ನಿಂದ 2ಕಿ.ಮೀ. ದೂರದಲ್ಲಿದೆ.

ಪಾಂಡವರ ದೂತನಾಗಿ ಶ್ರೀಕೃಷ್ಣನು ಹಸ್ತಿನಾಪುರಕ್ಕೆ ಹೋದಾಗ ಅಲ್ಲಿ ಅವನಿಗೆ ಸರಿಯಾದ ಮರ್ಯಾದೆ ಸಿಗಲಿಲ್ಲ. ಆಗ ಅಲ್ಲಿ ತನ್ನ ವಿಶ್ವರೂಪವನ್ನು ತೋರಿಸಿದನು. ಜನಮೇಜಯ ಮಹಾರಾಜನು ಶ್ರೀಕೃಷ್ಣನನ್ನು ವಿಶ್ವರೂಪವನ್ನು ತೋರಿಸೆಂದು ಬೇಡಲು ಈ ಸ್ಥಳದಲ್ಲಿ ವಿಶ್ವರೂಪವನ್ನು ತೋರಿಸಿದನು.

**ಮೂಲವರ್ : ಪಾಂಡವ ದೂತರ್ (ವಿಶ್ವರೂಪಂ)**
**ತಾಯಾರ್ : ರುಕ್ಮಿಣಿ, ಸತ್ಯಭಾಮ**
**ತೀರ್ಥಂ : ಮತ್ಸ್ಯ ತೀರ್ಥಂ**
**ವಿಮಾನಂ : ವೇದಕೋಟಿ ವಿಮಾನಂ, ಚಕ್ರ ವಿಮಾನಂ**
**ಪ್ರತ್ಯಕ್ಷಗೊಂಡಿರುವುದು : ಜನಮೇಜಯ ಮಹಾರಾಜ, ಆರಿದ್ರ ಮುನಿ**

**ಮಂಗಳಶಾಸನ ಮಾಡಿರುವವರು :**

**1. ತಿರುಮಂಗೈಆಳ್ವಾರ್, 2. ತಿರುಮಡಿಸೈ ಆಳ್ವಾರ್, 3. ಬೂತತ್ತಾಳ್ವಾರ್, 4. ಪೇಯ್ ಆಳ್ವಾರ್**

## 49. ತಿರುನೀಲಾತುಂಗಳ್‌ತುಂಡಂ

॥ ಓಂ ಶ್ರೀನೀಲಾತ್ತಿಂಗಳ್ ತುಂಡತಾಯಾರ್ ಸಮೇತ
ಶ್ರೀಚಂದ್ರಚೂಡ ಪೆರುಮಾಳ್ ಸ್ವಾಮಿನೇ ನಮಃ ॥

ಈ ಸನ್ನಿಧಿಯು ಪೆರಿಯ ಕಾಂಚೀಪುರದಲ್ಲಿರುವ ಏಕಾಂಬರನಾಥ ಸ್ವಾಮಿಯ ದೇವಸ್ಥಾನದ ಪ್ರಾಕಾರದಲ್ಲಿದೆ. ಸುಂದರವಾದ ವಿಗ್ರಹ ಪೂಜಾವಿಧಿಗಳು ವೈಷ್ಣವ ಸಂಪ್ರದಾಯದಂತೆ ನಡೆಯುವುದಿಲ್ಲ. ಆದರೆ ನಿತ್ಯ ಪೂಜೆ ನಡೆಯುತ್ತದೆ.

ಕಾಮಾಕ್ಷಿ (ಪಾರ್ವತಿ) ತಪಸ್ಸು ಮಾಡುವಾಗ ಶಿವನು ಆಕೆಯ ತಪಸ್ಸು ಭಂಗ ಮಾಡಲು ಆಕೆ ಕುಳಿತಿದ್ದ ಮಾವಿನ ಮರವನ್ನು ಸುಟ್ಟು ಹಾಕಿದನು. ಆಗ ಆಕೆಗೆ ದಾಹವಾದಾಗ ಆಕೆಯು ವಾಮನನನ್ನು ತನ್ನ ದಾಹ ತೀರಿಸುವಂತೆ ಬೇಡಿದಳು. ವಾಮನನು ಚಕ್ರಧಾರಿಯಾಗಿ ಆ ಮರವನ್ನು ಪುನಃ ಹಸಿರಾಗುವಂತೆ ಮಾಡಿ ಆಕೆಯ ದಾಹವನ್ನು ತೀರಿಸಿದನು. ಆದ್ದರಿಂದ ಈಕೆಗೆ ನೀಲಾತ್ತಿಂಗಳ್

ತುಂಡತ್ತಾನ್ ಎಂಬ ಹೆಸರು ಬಂದಿತು.

**ಮೂಲವರ್ : ಚಂದ್ರಚೂಡ ಪೆರುಮಾಳ್**

**ತಾಯಾರ್ : ನೀಲಾತಿಂಗಳ್ ತುಂಡತ್ತಾಯಾರ್**

**ತೀರ್ಥಂ : ಚಂದ್ರ ಪುಷ್ಕರಣಿ**

**ವಿಮಾನಂ : ಸೂರ್ಯ ವಿಮಾನಂ**

**ಪ್ರತ್ಯಕ್ಷಗೊಂಡಿರುವುದು : ಶಿವ**

**ಮಂಗಳಶಾಸನ ಮಾಡಿರುವವರು :**

**1. ತಿರುಮಂಗೈಆಳ್ವಾರ್**

## 50. ತಿರುಊರಗಂ

**॥ ಓಂ ಶ್ರೀಅಮುದವಲ್ಲಿ ಸಮೇತ ಶ್ರೀಉಲಗಳಂದ ಸ್ವಾಮಿನೇ ನಮಃ ॥**

ವಾಮನನು ಬಲಿ ಚಕ್ರವರ್ತಿಯನ್ನು ತನ್ನ ಮೂರನೇ ಪಾದದಿಂದ ಸಂಹಾರ ಮಾಡುವಾಗ ಬಲಿ ಚಕ್ರವರ್ತಿ 'ದೇವಾ ನಾನು ನಿನಗೋಸ್ಕರ 3ನೇ ಹೆಜ್ಜೆಯನ್ನು ಇಡುವುದಕ್ಕೋಸ್ಕರ ತಲೆ ತಗ್ಗಿಸಿದ್ದೆ. ನಿನ್ನ ದರ್ಶನ ನನಗಾಗಲಿಲ್ಲ. ದಯವಿಟ್ಟು ನಿನ್ನ ದರ್ಶನವನ್ನು ಕರುಣಿಸು' ಎಂದು ಕೇಳಿದಾಗ ವಾಮನನು ತನ್ನ ದರ್ಶನವನ್ನು ಬಲಿಚಕ್ರವರ್ತಿಗೆ ತೋರಿಸುತ್ತಾನೆ.

ಈ ಸನ್ನಿಧಿಯು ಉಳಗಳಂದ ಪೆರುಮಾಳ್ ಸನ್ನಿಧಿಯಲ್ಲಿ ನಾಲ್ಕು ದಿವ್ಯ ದೇವಸ್ಥಾನಗಳು ಇದೆ. ಮೂರ್ತಿಯು ಬಹಳ ದೊಡ್ಡದಾಗಿದ್ದು ಸರ್ಪದ ಆಕಾರದಲ್ಲಿ ಇರುವುದರಿಂದ 'ಉರಗಂ' ಎಂಬ ಹೆಸರು ಬಂದಿದೆ.

ಮೂಲವರ್ : ತ್ರಿವಿಕ್ರಮ (ವಾಮನ) ಉಲಗಳಂದ ಪೆರುಮಾಳ್

ಉತ್ಸವರ್ : ಪೇರಹತ್ತಾನ್

ತಾಯಾರ್ : ಅಮುದವಲ್ಲಿ ನಾಚ್ಚಿಯಾರ್

ತೀರ್ಥಂ : ನಾಗ ತೀರ್ಥ

ವಿಮಾನಂ : ಸಾರಶ್ರೀಕರ ವಿಮಾನಂ

ಪ್ರತ್ಯಕ್ಷಗೊಂಡಿರುವುದು: ಆದಿಶೇಷನ್

ಮಂಗಳಶಾಸನ ಮಾಡಿರುವವರು : 1. ತಿರುಮಂಗೈಆಳ್ವಾರ್, 2. ತಿರುಮೊಳಿಶಿ ಆಳ್ವಾರ್

# 51. ತಿರುವೆಕ್ಕ

**॥ ಓಂ ಶ್ರೀಕೋಮಲವಲ್ಲಿ ಸಮೇತ ಶ್ರೀಸೊನ್ನವಣ್ಣಂಸ್ಯೆದ ಪೆರುಮಾಳ್ ಸ್ವಾಮಿನೇ ನಮಃ ॥**

ಶ್ರೀವರದರಾಜರ ಸನ್ನಿಧಿಯಿಂದ 1ಕಿ.ಮೀ. ದೂರದಲ್ಲಿದೆ. ಯಥೋಕ್ತಕಾರಿ ಸನ್ನಿಧಿ ಎಂದು ಪ್ರಸಿದ್ಧವಾದ ಹೆಸರು.

ಈ ಕ್ಷೇತ್ರದಲ್ಲಿ ವಿರಾಜಮಾನವಾಗಿರುವ ಅರ್ಚಾಮೂರ್ತಿಗೆ "ಯಥೋಕ್ತಕಾರಿ" ಎಂಬ ಪ್ರಸಿದ್ಧವಾದ ಹೆಸರುಂಟು.

ಇದರ ಹಿನ್ನಲೆಯಲ್ಲಿ ಒಂದು ಸ್ವಾರಸ್ಯವಾದ ಪ್ರಸಂಗವಿದೆ. ಈ ಸ್ಥಳದ ರಾಜನಿಗೆ ಮಂತ್ರಿಯು ತಿರುಮಳಿಶೈ ಆಳ್ವಾರ್ ಅವರು ಎಲ್ಲಿ ಹೋದರೂ ದೇವರು ಅದೇ ದಿಕ್ಕಿನೆಡೆ ನೋಡುತ್ತಾನೆ ಎಂದು ಹೇಳುತ್ತಾನೆ. ಇದನ್ನು ಕೇಳಿದ ರಾಜ ಆಳ್ವಾರರ ಶಿಷ್ಯನಾದ ಕಣಿಕಣ್ಣನ್‌ನನ್ನು ಕರೆಸಿ ನಿನ್ನ ಗುರುಗಳನ್ನು ಕರೆಸು. ನನ್ನ ಮೇಲೆ ಹಾಡನ್ನು ಹಾಡಲಿ ಎಂದು ಆದೇಶ ನೀಡುತ್ತಾನೆ. ಕಣಿಕಣ್ಣನನು ತಮ್ಮ ಗುರುಗಳು ದೇವರನ್ನು ಬಿಟ್ಟು ಬೇರಾರ ಮೇಲೂ ಹಾಡನ್ನು ಹಾಡುವುದಿಲ್ಲ ಎಂದು ತಿಳಿಸಿದಾಗ ರಾಜನು ಕೋಪಗೊಂಡು ಕಣಿಕಣ್ಣನನ್ನು ಊರು ಬಿಟ್ಟು ತೊಲಗು ಎಂದು ಆಜ್ಞಾಪಿಸುತ್ತಾನೆ.

ತಿರುಮಳಿಶೈ ಆಳ್ವಾರರು ಶಿಷ್ಯನ ವಿಯೋಗ ಸಹಿಸಲಾರದೆ ತಾವು ಹೊರಡುವ ಮುನ್ನ ವೇಗಾಸೇತು ಅರ್ಚಾಮೂರ್ತಿಯ ಬಳಿ ಹೋಗಿ "ಕಣಿಕಣ್ಣನೇ ಇಲ್ಲದಿರುವಾಗ ನಮಗೇನು ಕೆಲಸ. ನೀವೂ ಹೊರಡಿ" ಎಂದು ಹೇಳಿದರು. ಅದರಂತೆ ಪರಮಾತ್ಮನು ತಾನು ಮಲಗಿದ್ದ ಆದಿಶೇಷನನ್ನು ಚಾಪೆಯ ರೂಪದಲ್ಲಿ ಸುತ್ತಿಕೊಂಡು ಆಳ್ವಾರನ್ನು ಹಿಂಬಾಲಿಸಿದ. ಆಗ ಆ ಊರೇ ಕತ್ತಲಾಯಿತು.

ಕಾರಣವೇನೆಂದು ರಾಜನು ಕೇಳಲು ಮಂತ್ರಿಯು ಕಣಿಕಣ್ಣನ್, ತಿರುಮಳಿಶೈ ಆಳ್ವಾರರು ಹೊರಡುವಾಗ ಭಗವಂತನೂ ಅವರ ಹಿಂದೆಯೇ ಹೊರಟುಹೋದರು. ಆದಕಾರಣ ಈ ಸ್ಥಳ ಕತ್ತಲಾಗಿದೆ ಎಂದು ತಿಳಿಸಿದನು. ಆ ಸ್ಥಳವೇ ಓರ್ ಇರುಕ್ಕೈ.

ವಿಷಯ ತಿಳಿದ ರಾಜನು ಓರ್ ಇರುಕ್ಕೈ ಸ್ಥಳಕ್ಕೆ ಓಡಿ ಬಂದು ಆಚಾರ್ಯರ

ಕ್ಷಮೆ ಕೋರಿ ವಾಪಸ್ ಕಾಂಚೀಪುರಕ್ಕೆ ಬರುವಂತೆ ಪ್ರಾರ್ಥಿಸಿಕೊಂಡ. ಆಗ ಆಳ್ವಾರರು ಪ್ರಸನ್ನರಾಗಿ ಪುನಃ ನಗರಕ್ಕೆ ಹಿಂತಿರುಗುವಾಗ ಪರಮಾತ್ಮನನ್ನುದ್ದೇಶಿಸಿ 'ರಾಜನೇ ಕರೆಯುತ್ತಿರುವಾಗ ಬನ್ನಿ ಮತ್ತೆ ಹಿಂತಿರುಗಿ ಹೋಗೋಣ' ಎಂದರು. ಪರಮಾತ್ಮನೂ ಯಥಾಸ್ಥಾನ ಸೇರಿದ. ಆದರೆ ಈ ಬಾರಿ ಮೊದಲು ಮಲಗಿದ ವಿರುದ್ಧ ದಿಕ್ಕಿನಲ್ಲಿ ಮಲಗಿದ. ಹಿಂದೆ ಬಲಗೈಯನ್ನೇ ದಿಂಬಾಗಿ ಇಟ್ಟುಕೊಂಡಿದ್ದ ಭಗವಂತನು ಈಗ ಎಡಗೈಯನ್ನು ದಿಂಬಾಗಿ ಇಟ್ಟುಕೊಂಡು ಮಲಗಿದರು. ಶ್ರೀರಂಗನಾಥನು ಶಯನಿಸಿರುವ ಎಲ್ಲಾ ಕ್ಷೇತ್ರಗಳಲ್ಲೂ ಬಲಗೈಯನ್ನೇ ದಿಂಬಾಗಿ ಇಟ್ಟುಕೊಂಡಿದ್ದಾರೆ. ಈ ಕ್ಷೇತ್ರದಲ್ಲಿ ಮಾತ್ರ ಎಡಗೈಯನ್ನು ತಲೆದಿಂಬಾಗಿ ಇಟ್ಟುಕೊಂಡಿದ್ದಾನೆ. ಇದು ಅವನ ಭಕ್ತ ಪರಾಧೀನತೆಗೆ ಸಾಕ್ಷಿ. ಭಕ್ತರ ಮಾತಿನಂತೆ ನಡೆದನಾದ್ದರಿಂದ "ಯಥೋಕ್ತಕಾರಿ" ಎಂಬ ಹೆಸರು ಪ್ರಸಿದ್ಧವಾಯಿತು. ಇಂತಹ ಪರಮ ಪುರುಷನು ಎಲ್ಲಾ ಭಕ್ತರ, ಪಂಡಿತರ, ಪಾಮರರ ಅಭೀಷ್ಟಗಳನ್ನು ನೆರವೇರಿಸಿ ಆನಂದವನ್ನು ಉಂಟುಮಾಡುತ್ತಾನೆ ಎಂದು ಕೊಂಡಾಡಿದ್ದಾರೆ ಆಚಾರ್ಯರು. ತಮಿಳಿನಲ್ಲಿ 'ಸೊನ್ನವಣ್ಣಂ ಸೈದ ಪೆರುಮಾಳ್' ಎನ್ನುತ್ತಾರೆ.

ಈ ಸ್ಥಳದಲ್ಲಿ ನಿಮ್ಮ ಬೇಡಿಕೆಗಳು ಏನಿದ್ದರೂ ಪ್ರಾರ್ಥಿಸಿದರೆ ಆ ಭಗವಂತನು ಪೂರೈಸುತ್ತಾನೆ.

**ಮೂಲವರ್ : ಯಥೋಕ್ತಕಾರಿ, ಸೊನ್ನವಣ್ಣಂ ಸೈದ ಪೆರುಮಾಳ್**

**ತಾಯಾರ್ : ಕೋಮಲವಲ್ಲಿ ನಾಚ್ಚಿಯಾರ್**

**ತೀರ್ಥಂ : ಪೋಯ್‌ಗೈ ಪುಷ್ಕರಣಿ**

**ವಿಮಾನಂ : ವೇದಸಾರ ವಿಮಾನಂ**

**ಪ್ರತ್ಯಕ್ಷಗೊಂಡಿರುವುದು: ಬ್ರಹ್ಮ, ಪೋಯ್‌ಗೇಯ್ ಆಳ್ವಾರ್, ಭೂತತ್ತಾಳ್ವಾರ್, ಕಣಿಕಣ್ಣನ್**

**ಮಂಗಳಶಾಸನ ಮಾಡಿರುವವರು :**

**1. ತಿರುಮಳಿಶೈ ಆಳ್ವಾರ್, 2. ಪೋಯ್‌ಗೈ ಆಳ್ವಾರ್, 3. ತಿರುಮಂಗೈಆಳ್ವಾರ್, 4. ಪೇಯ್ ಆಳ್ವಾರ್, 5. ನಮ್ಮಾಳ್ವಾರ್**

# 52. ತಿರುಕಾರಗಂ

॥ ಓಂ ಶ್ರೀಪದ್ಮಾಮಣಿ ಸಮೇತ ಶ್ರೀಕರುಣಾಕರ ಸ್ವಾಮಿನೇ ನಮಃ ॥

ಈ ಸನ್ನಿಧಿಯು ಉಳಗಳಂದ ಪೆರುಮಾಳ್ ಸನ್ನಿಧಿಯಲ್ಲಿ ನಾಲ್ಕು ದಿವ್ಯ ದೇವಸ್ಥಾನಗಳು ಇದೆ.

ಮೂಲವರ್ : ಕರುಣಾಕರ ಪೆರುಮಾಳ್

ತಾಯಾರ್ : ಪದ್ಮಾಮಣಿ ತಾಯಾರ್

ತೀರ್ಥಂ : ಅಪ್ರಾಯ ತೀರ್ಥಂ

ವಿಮಾನಂ : ವಾಮನ ವಿಮಾನಂ, ರಮ್ಯ ವಿಮಾನಂ

ಪ್ರತ್ಯಕ್ಷಗೊಂಡಿರುವುದು : ಕಾರಗ ಮಹರ್ಷಿ

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್

# 53. ತಿರುಕ್ಕಾರ್‌ವಾನಂ

॥ ಓಂ ಶ್ರೀಕಮಲವಲ್ಲಿ ಸಮೇತ ಶ್ರೀಕಾರ್‌ವಾನರ್ ಸ್ವಾಮಿನೇ ನಮಃ ॥

ಈ ಸನ್ನಿಧಿಯು ಉಳಗಳಂದ ಪೆರುಮಾಳ್ ಸನ್ನಿಧಿಯಲ್ಲಿ ನಾಲ್ಕು ದಿವ್ಯ ದೇವಸ್ಥಾನಗಳು ಇದೆ.

ಮೂಲವರ್ : ಕಾರ್‌ವಾನರ್

ತಾಯಾರ್ : ಕಮಲವಲ್ಲಿ

ತೀರ್ಥಂ : ಗೌರಿ ತಡಾಕಂ

ವಿಮಾನಂ : ಪುಷ್ಕಳ ವಿಮಾನಂ

ಪ್ರತ್ಯಕ್ಷಗೊಂಡಿರುವುದು : ಗೌರಿ

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್

# 54. ತಿರುಕಲ್ವನೂರ್ (ಕಲ್ವನ್, ಕಳ್ಳ)

॥ ಓಂ ಶ್ರೀಅಂಜಿಲೈವಲ್ಲಿ ಸಮೇತ ಶ್ರೀಕಲ್ವರ್ ಸ್ವಾಮಿನೇ ನಮಃ ॥

ಕಂಚಿಯ ಪ್ರಸಿದ್ಧವಾದ ಕಾಮಾಕ್ಷಿ ದೇವಸ್ಥಾನದಲ್ಲಿ ಕಾಮಾಕ್ಷಿ ಅಮ್ಮನ ಗರ್ಭಗುಡಿಯಲ್ಲಿ ಹಿಂಭಾಗದಲ್ಲಿರುವ ಒಂದು ಸಣ್ಣ ಸನ್ನಿಧಿ. ಮುಂದೆ ಇರುವ ಒಂದು ಕನ್ನಡಿಯಲ್ಲಿ (ದರ್ಪಣ) ನೋಡಬಹುದು.

ಕಾಮಾಕ್ಷಿ ಅಮ್ಮನವರು (ಪಾರ್ವತಿ) ಶಿವನೊಡನೆ ವಾಗ್ವಾದ ಮಾಡಿಕೊಂಡು ತಪಸ್ಸಿನಲ್ಲಿ ಕುಳಿತಿರುತ್ತಾರೆ. ಶಿವನೂ ವಿರಹಿಯಾಗಿ ಕುಳಿತಿರುತ್ತಾನೆ. ಶಿವ ಶಕ್ತಿ ಒಂದಾಗದೆ ಇಬ್ಬರೂ ಶಕ್ತಿಹೀನರಾಗಿರುತ್ತಾರೆ. ಆಗ ರಾಕ್ಷಸರ ಅಟ್ಟಹಾಸ ವಿಪರೀತವಾಗುತ್ತದೆ. ಇದನ್ನು ಕಂಡ ನಾರಾಯಣನು ತನ್ನ ಪತ್ನಿ ಲಕ್ಷ್ಮಿಯೊಂದಿಗೆ ಕಾಮಾಕ್ಷಿ ಬಳಿ ಬರುತ್ತಾರೆ. ಪತ್ನಿಯೊಡನೆ 'ನೀನು ಒಳಗೆ ಹೋಗಿ ಕಾಮಾಕ್ಷಿಗೆ ನೀನು ಯಾರೆಂದು ತಿಳಿಸಿ ಹಳೆಯ ನೆನಪುಗಳನ್ನು ನೆನಪಿಸಿ ಶಿವನೊಡನೆ ಒಂದಾಗಲು ಹೇಳು' ಎಂದು ಹೊರಗೆ ಕಾದಿರುತ್ತಾನೆ. ಲಕ್ಷ್ಮಿಯು ಒಳಗೆ ಹೋಗಿ ಕಾಮಾಕ್ಷಿಯೊಂದಿಗೆ ಮಾತನಾಡಿ ಪೂರ್ವೇತಿಹಾಸವನ್ನು ತಿಳಿಸಿ ಶಿವನೊಂದಿಗೆ ಒಂದಾಗಲು ತಿಳಿಸುತ್ತಾಳೆ. ಆಗ ಕಾಮಾಕ್ಷಿಯು 'ಆಯ್ತು. ನನ್ನ ಅಣ್ಣನೆಲ್ಲಿ (ನಾರಾಯಣ)?' ಎಂದು ಕೇಳುತ್ತಾಳೆ.

ನಾರಾಯಣನು ಹೊರಗೆ ನಡೆಯುತ್ತಾ, ಕುಳಿತುಕೊಂಡು ಮಲಗಿ ಎದ್ದು ತಿರುಗಿ ತಿರುಗಿ ಒಳಗೆ ನೋಡುತ್ತಾನೆ. ಆ ಸಮಯದಲ್ಲಿ ಕಾಮಾಕ್ಷಿಯು ನಾರಾಯಣನನ್ನು ನೋಡಿ 'ನನ್ನ ಅಣ್ಣ ಕಳ್ಳನ ರೀತಿ ನೋಡುತ್ತಿದ್ದಾನೆ' ನೋಡು ಎಂದು ಲಕ್ಷ್ಮಿಗೆ ತಿಳಿಸುತ್ತಾಳೆ.

ಅಂದಿನಿಂದ ನಾರಾಯಣನಿಗೆ ಕಳ್ಳ (ಕಳ್ವನ್) ಎಂದು ಹೆಸರು ಬಂದಿತು.

ನಡೆದಿರುವುದು (ನಡಂದಾನ್) – ನಿಂತಿರುವ ಭಂಗಿ

ಕುಳಿತಿರುವುದು (ಇರುಂದಾನ್) – ಕುಳಿತುಕೊಂಡಿರುವ ಭಂಗಿ

ಮಲಗಿರುವುದು (ಕಿಡಂದಾನ್) – ಶಯನಿಸಿರುವ ಭಂಗಿ

ಈ ಮೂರೂ ಭಂಗಿಗಳನ್ನು ಕಾಮಾಕ್ಷಿ ದೇವಾಲಯದ ಹಿಂಭಾಗದಲ್ಲಿ ಈ ಮೂರೂ ಭಂಗಿಗಳಲ್ಲಿ ಮೂರು ಮಜಲುಗಳಲ್ಲಿ ದೇವಸ್ಥಾನ ಇದೆ.

ಮೂಲವರ್ : ಕಲ್ವರ್

ತಾಯಾರ್ : ಅಂಜಲೈವಲ್ಲಿ

ತೀರ್ಥಂ : ನಿತ್ಯ ಪುಷ್ಕರಣಿ

ವಿಮಾನಂ : ವಾಮನ ವಿಮಾನಂ

ಪ್ರತ್ಯಕ್ಷಗೊಂಡಿರುವುದು: ಅಶ್ವತ್ಥ ನಾರಾಯಣ

ಮಂಗಳಶಾಸನ ಮಾಡಿರುವವರು : 1. ತಿರುಮಂಗೈಆಳ್ವಾರ್

# 55. ತಿರುಪವಳವಣ್ಣಂ

॥ ಓಂ ಶ್ರೀಪವಳವಲ್ಲಿ ಸಮೇತ ಶ್ರೀಪವಳವಣ್ಣನ್ ಸ್ವಾಮಿನೇ ನಮಃ ॥

ಪೆರಿಯ ಕಾಂಚೀಪುರದಲ್ಲಿರುವ ದೇವಸ್ಥಾನ. ಒಂದು ಪವಳವಣ್ಣನ್, ಎರಡನೆಯದು ಪಚ್ಚೈವಣ್ಣನ್. ಎರಡೂ ದೇವಾಲಯಗಳು ಸೇರಿ ಒಂದೇ ದಿವ್ಯ ದೇಶ.

ಪವಳವಣ್ಣನ್, ಪಚ್ಚೈವಣ್ಣನ್ ದೇಗುಲಕ್ಕೆ ಹೋಗಿ ಇಬ್ಬರೂ ಒಂದು ಪ್ರದಕ್ಷಿಣೆ ಬಂದು ಪವಳವಣ್ಣನ್ ಹೊರಗೆ ಬರುತ್ತಾರೆ. ಪಚ್ಚೈವಣ್ಣನ್ ಒಳಕ್ಕೆ ಹೋಗುತ್ತಾರೆ.

ಮೂಲವರ್ : ಪಚ್ಚೈವಣ್ಣನ್, ಪವಳವಣ್ಣನ್

ತಾಯಾರ್ : ಪವಳವಳ್ಳಿ, ಪ್ರವಾಳವಳ್ಳಿ

ತೀರ್ಥಂ : ಚಕ್ರ ತೀರ್ಥಂ

ವಿಮಾನಂ : ಪ್ರವಾಳ ವಿಮಾನಂ

ಪ್ರತ್ಯಕ್ಷಗೊಂಡಿರುವುದು : ಅಶ್ವಿನಿ ದೇವತೆಗಳು, ಪಾರ್ವತಿ, ಬ್ರಹ್ಮ

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್



# 56. ತಿರುಪರಮೇಶ್ವರ ವಿನ್ನಹರಂ

॥ ಓಂ ಶ್ರೀವೈಕುಂಠವಲ್ಲಿ ಸಮೇತ ಶ್ರೀಪರಮಪದನಾಥ ಸ್ವಾಮಿನೇ ನಮಃ ॥

ಪೆರಿಯ ಕಾಂಚೀಪುರದಲ್ಲಿದೆ.

ವಿದರ್ಭ ದೇಶದ ರಾಜನು ಪುತ್ರಾಕಾಂಕ್ಷಿಯಾಗಿ ಶಿವನನ್ನು ಧ್ಯಾನ ಮಾಡುತ್ತಾನೆ. ಸಂತೃಪ್ತಿಗೊಂಡ ಶಿವನು ಪಲ್ಲವನ್, ವಿಲ್ಲವನ್ ಎಂಬ ಇಬ್ಬರು ಗಂಡು ಮಕ್ಕಳನ್ನು ಕರುಣಿಸುತ್ತಾನೆ. ಪಲ್ಲವನ್, ವಿಲ್ಲವನ್ ಅಶ್ವಮೇಧಯಾಗವನ್ನು ಮಾಡುವಾಗ ವೈಕುಂಠದಲ್ಲಿ ಇರುವಂತೆ ನಾರಾಯಣನು ದರ್ಶನ ಭಾಗ್ಯ ಕರುಣಿಸುವನು. ಆ ದೇವರು ಬಹಳ ಚಿಕ್ಕದಾಗಿದೆ ಅಂದರೆ ಸಾಮಾನ್ಯ ಮನುಷ್ಯನು ಮಲಗಿದರೆ ಹೇಗಿರುತ್ತಾನೋ ಹಾಗೆ ಇದೆ. ಈ ಮೂರ್ತಿಯ ದರ್ಶನ ಮಾಡಿದರೆ ನಮಗೆ ವೈಕುಂಠದಲ್ಲಿರುವಂತೆಯೇ ಭಾಸವಾಗುತ್ತದೆ.

ಭರದ್ವಾಜ ಮುನಿಯು ತಪಸ್ಸು ಮಾಡುತ್ತಿರುವಾಗ ಗಂಧರ್ವ ಕನ್ಯೆಯರು ತಪಸ್ಸು ಭಂಗ ಮಾಡಲು ಬಂದರು. ಮುನಿಯು ತನ್ನ ತಪಸ್ಸನ್ನು ಬಿಟ್ಟು ಗಂಧರ್ವ ಕನ್ಯೆಯನ್ನು ಅಪ್ಪಿಕೊಳ್ಳುತ್ತಾರೆ. ಆ ಸಂದರ್ಭದಲ್ಲಿ ಒಂದು ಗಂಡುಮಗುವಿನ ಜನನವಾಗುತ್ತದೆ. ಬ್ರಹ್ಮನು ಈ ಗಂಡು ಮಗುವನ್ನು ಏನು ಮಾಡಬೇಕೆಂದು ಯೋಚಿಸುತ್ತಿರುವಾಗ ಮಹಾವಿಷ್ಣು ಮತ್ತು ಪರಮೇಶ್ವರರು ಬಂದು ನಾವು ಅದರ ಪೋಷಣೆ ಮಾಡುತ್ತೇವೆಂದು ಹೇಳಿದರು. ಮಹಾವಿಷ್ಣು ಮತ್ತು ಮಹಾಲಕ್ಷ್ಮಿ ಬೇಡರ ವೇಷದಲ್ಲಿ ಭೂಮಿಗೆ ಬಂದು ಆ ಮಗುವನ್ನು ಸಾಕುತ್ತಾರೆ. ಪಲ್ಲವರ ನಾಡಿನಲ್ಲಿ ಮಹಾರಾಜನಿಗೆ ಮಕ್ಕಳು ಇಲ್ಲದಿದ್ದ ಕಾರಣ ಆ ಮಗುವನ್ನು ಅವರಿಗೆ ನೀಡುತ್ತಾರೆ. ಆದ್ದರಿಂದ ಈ ಊರಿಗೆ ತಿರುಪರಮೇಶ್ವರ ವಿಣ್ಣಹರಂ ಎಂಬ ಹೆಸರು ಬಂದಿತು.

**ಮೂಲವರ್ : ಪರಮಪದನಾಥ, ವೈಕುಂಠನಾಥನ್**

**ತಾಯಾರ್ : ವೈಕುಂಠವಲ್ಲಿ**

**ತೀರ್ಥಂ : ಆಯಿರಮದ ತೀರ್ಥಂ**

**ವಿಮಾನಂ : ಮುಕುಂದ ವಿಮಾನಂ**

**ಪ್ರತ್ಯಕ್ಷಗೊಂಡಿರುವುದು : ಪಲ್ಲವ ರಾಜ**

**ಮಂಗಳಶಾಸನ ಮಾಡಿರುವವರು : 1. ತಿರುಮಂಗೈಆಳ್ವಾರ್**

# 57. ತಿರುಪ್ಪುಕುಳಿ

॥ ಓಂ ಶ್ರೀಮರಗದವಲ್ಲಿ ಸಮೇತ ಶ್ರೀವಿಜಯರಾಘವ ಸ್ವಾಮಿನೇ ನಮಃ ॥

ಕಾಂಚೀಪುರದಿಂದ ಸುಮಾರು 12 ಕಿ.ಮೀ. ದೂರದಲ್ಲಿದೆ. ಕಾಂಚೀಪುರದಿಂದ ಬೆಂಗಳೂರಿಗೆ ಬರುವ ಮಾರ್ಗದಲ್ಲಿ ತಿರುಪ್ಪುಕೊಳಿ ಇದ್ದು, ಬಸ್ಸುಗಳು ಇಲ್ಲಿಯೇ ನಿಲ್ಲುತ್ತದೆ. ದೇವಸ್ಥಾನವು ಮುಖ್ಯ ರಸ್ತೆಯಿಂದ ಅರ್ಧ ಕಿ.ಮೀ. ಒಳಭಾಗದಲ್ಲಿದೆ. ಬಹಳ ಚಿಕ್ಕ ಊರು.

ಈ ಸ್ಥಳದಲ್ಲಿ ಜಟಾಯು ರಾವಣನಿಂದ ಹತನಾಗಿ ಬಿದ್ದನು. ಜಟಾಯುವಿನ ರೆಕ್ಕೆಯು ಇಲ್ಲಿ ಕತ್ತರಿಸಿ ಬಿದ್ದಿತು. ಪುಕ್ಕವು ಇಲ್ಲಿ ಬಿದ್ದ ಜಾಗವಾದ್ದರಿಂದ ಈ ಸ್ಥಳವನ್ನು ತಿರುಪುಳ್ ಕುಡಿ ಎಂದು ಹೆಸರಾಗಿದೆ.

ಈ ದೇವಾಲಯದಲ್ಲಿ ಪ್ರತಿ ಅಮಾವಾಸ್ಯೆಯಂದು ಪುತ್ರ ಭಾಗ್ಯವಿಲ್ಲದ ಹೆಂಗಸರು ಬಂದು ಜಟಾಯು ತೀರ್ಥದಲ್ಲಿ ಸ್ನಾನ ಮಾಡಿ ಅರ್ಚಕರು ಕೊಟ್ಟಿರುವ ಹುರಿದ ಹೆಸರುಕಾಳನ್ನು ತಮ್ಮ ಒದ್ದೆ ಸೀರೆಯ ಸೆರಗಿನಲ್ಲಿ ಕಟ್ಟಿಕೊಂಡು ಮಲಗುತ್ತಾರೆ. ಮಾರನೆ ದಿನ ಅರ್ಚಕರು ದೇವರ ಪೂಜೆಯನಂತರ ನೆರೆದಿರುವ ಹೆಂಗಸರ ಸೀರೆಯ ಸೆರಗಿನಲ್ಲಿರುವ ಹುರಿದಿರುವ ಹೆಸರು ಕಾಳನ್ನು ದೇವರ ಮುಂದೆ ಹಾಕಲು ತಿಳಿಸುತ್ತಾರೆ. ಆಗ ಆ ಹುರಿದಿರುವ ಹೆಸರು ಕಾಳಿನಲ್ಲಿ ಮೊಳಕೆ ಬಂದಿದ್ದರೆ ಅವರಿಗೆ ಪುತ್ರಭಾಗ್ಯ ಆಗುತ್ತದೆ ಎಂಬ ಪ್ರತೀತಿ ಇದೆ. ಇಂದಿಗೂ ಇಲ್ಲಿ ಬಹಳ ಜನ ಪುತ್ರಭಾಗ್ಯ ಇಲ್ಲದವರು ಪ್ರತೀ ಅಮಾವಾಸ್ಯೆಯಂದು ಬಂದು ಸೇವೆ ಸಲ್ಲಿಸುತ್ತಾರೆ.

**ಮೂಲವರ್ : ವಿಜಯರಾಘವ ಪೆರುಮಾಳ್**

**ತಾಯಾರ್ : ಮರಗದವಲ್ಲಿ**

**ತೀರ್ಥಂ : ಜಟಾಯು ತೀರ್ಥಂ**

**ವಿಮಾನಂ : ವಿಜಯಕೋಟಿ**

**ಪ್ರತ್ಯಕ್ಷಗೊಂಡಿರುವುದು : ಜಟಾಯು**

**ಮಂಗಳಶಾಸನ ಮಾಡಿರುವವರು :**

**1. ತಿರುಮಂಗೈಆಳ್ವಾರ್**

# 58. ತಿರುನಿಂಡ್ರವೂರ್ (ತಿನ್ನನೂರ್)

॥ ಓಂ ಶ್ರೀಸುಧಾವಲ್ಲಿ ಸಮೇತ ಶ್ರೀಭಕ್ತವತ್ಸಲ ಪೆರುಮಾಳ್ ಸ್ವಾಮಿನೇ ನಮಃ ॥

ಮದ್ರಾಸ್ ಮತ್ತು ಅರಕೋಣಂಗಳ ನಡುವೆ ಇರುವ ಊರು. ರೈಲ್ವೆ ಸ್ಟೇಷನ್ ಇದೆ. ಬಸ್ ಅನುಕೂಲವೂ ಚೆನ್ನಾಗಿದೆ. ದೊಡ್ಡ ಊರು. ಎಲ್ಲಾ ಅನುಕೂಲಗಳೂ ಇವೆ.

ಒಮ್ಮೆ ಶ್ರೀಮನ್ನಾರಾಯಣನು ವೈಕುಂಠದಲ್ಲಿ ಯೋಗ ನಿದ್ರೆಯಲ್ಲಿದ್ದಾಗ ಮಹಾಲಕ್ಷ್ಮಿಯು ಮತ್ತು ದೇವಸ್ತ್ರೀಯರು ಭೂಲೋಕದಲ್ಲಿ ಈ ಸ್ಥಳದಲ್ಲಿಯೇ ನಿಲ್ಲುತ್ತಾರೆ. ಆದ್ದರಿಂದ ಈ ಸ್ಥಳವನ್ನು ತಿರು (ಮಹಾಲಕ್ಷ್ಮಿ) ನಿಂಡ್ರ (ನಿಂತಿರುವ) ಊರ್ ಎಂದು ಹೆಸರು ಬಂದಿದೆ.

ಮಹಾಲಕ್ಷ್ಮಿಯು ಸ್ವಯಂಭು ಇಲ್ಲಿರುವ ಕಾರಣ ಈ ಊರಿನಲ್ಲಿ ಲಕ್ಷ್ಮೀಕಟಾಕ್ಷ ಬಹಳವಾಗಿರುತ್ತದೆ.

ಶ್ರೀಮನ್ನಾರಾಯಣನು ತನ್ನ ಯೋಗ ನಿದ್ರೆಯಾದ ಮೇಲೆ ಸಮುದ್ರರಾಜನನ್ನು ಲಕ್ಷ್ಮಿಯನ್ನು ಕರೆತರಲು ಕಳಿಸಿದನು. ಆಗ ಸಮುದ್ರ ರಾಜನು ಇಲ್ಲಿಗೆ ಬಂದು ಮಹಾಲಕ್ಷ್ಮಿಯನ್ನು ಕುರಿತು "ನನ್ನನ್ನು ಹುಟ್ಟಿಸಿದ ತಾಯಿಯೇ, (ಎನ್ನೈ ಪೆಟ್ರ ತಾಯಾರ್) ಬನ್ನಿ ಮತ್ತೆ ವೈಕುಂಠಕ್ಕೆ ಹೊರಡೋಣ" ಎಂದು ಕರೆದನು.

ಮೂಲವರ್ : ಭಕ್ತವತ್ಸಲ ಪೆರುಮಾಳ್

ತಾಯಾರ್ : ಸುಧಾವಲ್ಲಿ, ಎನ್ನೈಪೆಟ್ರ ತಾಯಾರ್

ತೀರ್ಥಂ : ವರುಣ ಪುಷ್ಕರಣಿ

ವಿಮಾನಂ : ಶ್ರೀನಿವಾಸ ವಿಮಾನಂ

ಪ್ರತ್ಯಕ್ಷಗೊಂಡಿರುವುದು : ವರುಣನ್, ಸಮುದ್ರ ರಾಜನ್

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್

# 59. ತಿರುವಲ್ಲೂರ್

॥ ಓಂ ಶ್ರೀಕನಕವಲ್ಲಿ ಸಮೇತ ಶ್ರೀವೀರರಾಘವ ಸ್ವಾಮಿನೇ ನಮಃ ॥

ಅರಕೋಣಂ ಮತ್ತು ಮದ್ರಾಸ್‌ಗಳ ನಡುವೆ ಇರುವ ದೊಡ್ಡ ಊರು. ರೈಲ್ವೆ ಸ್ಟೇಷನ್ ಇದೆ. ಎಲ್ಲಾ ಕಡೆಯಿಂದಲೂ ಬಸ್ ಅನುಕೂಲ ಚೆನ್ನಾಗಿದೆ. ರೈಲ್ವೆ ನಿಲ್ದಾಣದಿಂದ ದೇವಸ್ಥಾನವು 4ಕಿ.ಮೀ. ದೂರದಲ್ಲಿದೆ. ಬಸ್ ಸ್ಟಾಂಡಿಗೆ ಹತ್ತಿರ, ಬೇರೆ ಎಲ್ಲಾ ಅನುಕೂಲಗಳೂ ಚೆನ್ನಾಗಿವೆ.

ಶ್ರೀ ರುದ್ರನು ತನ್ನ ಬ್ರಹ್ಮಹತ್ಯಾ ದೋಷವನ್ನು ನೀಗಿಸಿಕೊಳ್ಳಲು ಇಲ್ಲಿನ ಪುಷ್ಕರಿಣಿಯಲ್ಲಿ ಸ್ನಾನ ಮಾಡಿದನೆಂದು ಅದರಿಂದ ಪುಷ್ಕರಿಣಿಗೆ ಹೆಚ್ಚಿನ ಮಹತ್ವವಿದೆಯೆಂದು ಸ್ಥಳ ಪುರಾಣವಿದೆ. ಆದ್ದರಿಂದ ಈ ದೇವರಿಗೆ ವೈದ್ಯವೀರರಾಘವ ಪೆರುಮಾಳ್ ಎಂಬ ಹೆಸರಿದೆ. ಈ ದೇಗುಲದಲ್ಲಿ ಉಪ್ಪು ಮತ್ತು ಕಾಳು ಮೆಣಸು ತೆಗೆದುಕೊಂಡು ಹೋಗಿ ಹಾಕಿದರೆ ತೀರದಿರುವ ಖಾಯಿಲೆಯು ವಾಸಿಯಾಗುತ್ತದೆಂಬ ನಂಬಿಕೆ ಇದೆ.

ಒಮ್ಮೆ ರಾಮಲಿಂಗ ಅಡಿಗಳಾರ್ ಮಹರ್ಷಿಗೆ ಅಸಾಧ್ಯವಾದ ಮತ್ತು ಕಡಿಮೆಯಾಗದ ಹೊಟ್ಟೆ ನೋವು ಬಂದಾಗ ಇಲ್ಲಿನ ಪುಷ್ಕರಣಿಯಲ್ಲಿ ಸ್ನಾನ ಮಾಡಿ ದೇವರನ್ನು ಪ್ರಾರ್ಥಿಸಿದಾಗ ತನ್ನ ಹೊಟ್ಟೆ ಬೇನೆ ವಾಸಿಯಾಯಿತು. ಆದ್ದರಿಂದ ಆ ಮಹರ್ಷಿ ದೇವರನ್ನು 'ವೈದ್ಯ ವೀರ ರಾಘವನ್' ಎಂಬ ಹೆಸರಿನಿಂದ ಕರೆದರು.

ಮೂಲವರ್ : ವೀರರಾಘವ ಪೆರುಮಾಳ್ (ಭುಜಂಗ ಶಯನಂ)
ತಾಯಾರ್ : ವಸುಮತಿ (ಕನಕವಲ್ಲಿ)
ತೀರ್ಥಂ : ಪಾಪನಾಶಿನಿ
ವಿಮಾನಂ : ವಿಜಯಕೋಟಿ ವಿಮಾನಂ
ಪ್ರತ್ಯಕ್ಷಗೊಂಡಿರುವುದು : ಶಾಲಿಹೋತ್ರ ಮುನಿ, ಬ್ರಹ್ಮ, ಶಂಕರ

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್, 2. ತಿರುಮಳಿಶೈ ಆಳ್ವಾರ್

# 60. ತಿರುವಳ್ಳಿಕೇಣಿ (ಚೆನ್ನೈ)

॥ ಓಂ ಶ್ರೀರುಕ್ಮಿಣಿ ಸಮೇತ ಶ್ರೀಪಾರ್ಥಸಾರಥಿ ಸ್ವಾಮಿನೇ ನಮಃ ॥

ಮದರಾಸು ನಗರದಲ್ಲಿರುವ ಪ್ರಸಿದ್ಧವಾದ ದೇವಸ್ಥಾನ. ತಿರುವಲ್ಲಿಕ್ಕೇಣಿ ಬಡಾವಣೆಯಲ್ಲಿ ದೇವಸ್ಥಾನವಿದೆ. ದೊಡ್ಡದಾದ ದೇವಸ್ಥಾನ.

ಸುಮತಿ ಎಂಬ ರಾಜನು ತಿರುಪತಿಯಲ್ಲಿ ದೇವರ ದರ್ಶನ ಮಾಡಿಕೊಂಡು ದೇವರ ಬಳಿ 'ನೀನು ಅರ್ಜುನನ ಸಾರಥಿಯಾಗಿರುವ ರೂಪದ ದರ್ಶನವನ್ನು ಮಾಡೆಂದು ಕೇಳಿದನು. ಆಗ ದೇವರು ಬೃಂದಾರಣ್ಯಂಕ್ಕೆ ಹೋಗು ಅಲ್ಲಿ ನಾನು ನಿಂತಿದ್ದೇನೆ. ಅಲ್ಲಿ ದರ್ಶನ ಮಾಡು' ಎಂದು ಅಶರೀರವಾಣಿ ಬಂದಿತು. ಅದೇ ರೀತಿ ರಾಜನು ಬೃಂದಾರಣ್ಯ (ತಿರುವಲ್ಲಿಕ್ಕೇಣಿ)ಗೆ ಬಂದು ದೇವರ ದರ್ಶನ ಮಾಡಿದನು.

ಇಲ್ಲಿನ ದೇವರಿಗೆ ಎರಡು ಕೈಗಳು. ಒಂದು ಕೈಯಲ್ಲಿ ಶಂಖ ಮತ್ತೊಂದರಲ್ಲಿ ಕೋಲನ್ನು ಹಿಡಿದಿರುತ್ತಾನೆ. ದೊಡ್ಡದಾದ ಮೀಸೆ ಇದೆ. ತಿರುವೆಂಕಟನಾಥನೇ ಕೃಷ್ಣನ ರೂಪದಲ್ಲಿ ಪಾರ್ಥಸಾರಥಿಯಾಗಿ ದರ್ಶನ ನೀಡುತ್ತಿದ್ದಾನೆ.

ಅಲ್ಲಿಕ್ಕೇಣಿ ತೀರ್ಥದಲ್ಲಿ ಇಂದ್ರ ತೀರ್ಥಂ, ಸೋಮ ತೀರ್ಥಂ, ಅಗ್ನಿ ತೀರ್ಥಂ, ಮೀನ ತೀರ್ಥಂ, ವಿಷ್ಣು ತೀರ್ಥಂ ಇದೆಯೆಂದು ಐತಿಹ್ಯವುಂಟು.

**ಮೂಲವರ್ : ವೇಂಕಟ ಕೃಷ್ಣನ್**

**ಉತ್ಸವರ್ : ಪಾರ್ಥಸಾರಥಿ**

**ತಾಯಾರ್ : ವೇದವಲ್ಲಿ**

**ತೀರ್ಥಂ : ಕೈರವಣಿ ಅಲ್ಲಿಕ್ಕೇಣಿ**

**ವಿಮಾನಂ : ಆನಂದ ವಿಮಾನಂ, ಪ್ರಣವ ವಿಮಾನಂ, ಪುಷ್ಪಕ ವಿಮಾನಂ, ಶೇಷ ವಿಮಾನಂ, ದೈವಿಕ ವಿಮಾನಂ**

**ಪ್ರತ್ಯಕ್ಷಗೊಂಡಿರುವುದು : ರುಕ್ಮಿಣಿ, ತೊಂಡೈಮಾನ್, ಸುಮತಿ ರಾಜನ್, ಅರ್ಜುನ, ಬೃಗು ಮಹರ್ಷಿ, ಮಾರ್ಕಂಡೇಯ, ಮಧುಮಾನ್ ಮಹರ್ಷಿ, ಸಪ್ತರೋಮ, ಅತ್ತಿಗಿರಿ ಮಹರ್ಷಿ, ಜಾಜಲಿ ಮಹರ್ಷಿ, ಅನಿರುದ್ಧ, ಪ್ರದ್ಯುಮ್ನ, ಬಲರಾಮ**

**ಮಂಗಳಶಾಸನ ಮಾಡಿರುವವರು :**

**1. ತಿರುಮಂಗೈಆಳ್ವಾರ್, 2. ಪೇಯ್ ಆಳ್ವಾರ್, 3. ತಿರುಮಳಿಶೈ ಆಳ್ವಾರ್**

# 61. ತಿರುನೀರ್‌ಮಲ್ಲೈ

**॥ ಓಂ ಶ್ರೀಅನಿಮಾಮಲರ್‌ಮಂಗಾ ಸಮೇತ ಶ್ರೀನೀರ್‌ವಣ್ಣ ಸ್ವಾಮಿನೇ ನಮಃ ॥**

ಚೆನ್ನೈನಿಂದ ಪಲ್ಲವರಂಗೆ ಹೋಗಿ, ಅಲ್ಲಿಂದ ಬಸ್ಸಿನಲ್ಲಿ ತಿರುನೀರ್‌ಮಲ್ಲೈಗೆ ಹೋಗಬಹುದು. ಇಲ್ಲಿ ಎರಡು ಸನ್ನಿಧಿಗಳಿದ್ದು ಒಂದು ಬೆಟ್ಟದ ಕೆಳಗೂ ಮತ್ತೊಂದು ಬೆಟ್ಟದ ಮೇಲೂ ಇದೆ. ಕೆಳಗೆ, ನೀರ್ ವಣ್ಣನ್ ದೇವರ ಮೂರ್ತಿಯಿದೆ. ಅನಿಮಾಮಲರ್ ಮಂಗೈ ತಾಯಾರ್. ಬೆಟ್ಟದ ಮೇಲೆ ಮೂಲದೇವರು 1. ಶ್ರೀರಂಗನಾಯಕಿ ಸಮೇತ ಶ್ರೀರಂಗನಾಥ 2. ಶ್ರೀ ಅಳಹಿಯ ಸಿಂಗರ್ 3. ಉಲಗಳಂದ ಪೆರುಮಾಳ್ ಇದೆ.

ಈ ಮೂವರು ಪೂರ್ವಭಿಮುಖವಾಗಿ ನಿಂತಿದ್ದಾರೆ. ಶ್ರೀರಂಗನಾಯಕಿ ಸಮೇತ ಶ್ರೀರಂಗನಾಥರ ಸುಂದರವಾದ ವಿಗ್ರಹ ಮೂರ್ತಿಯು ಕೆಳಗಿನ ದೇವಸ್ಥಾನದಲ್ಲಿದೆ. ತೊಂಡಮಾನ ಚಕ್ರವರ್ತಿಗೆ ಪ್ರತ್ಯಕ್ಷ. ವೈಖಾಸನ ಆಗಮರೀತ್ಯಾಪೂಜೆ. (ಆಳ್ವಾರ್ ನಿನ್ರಾನ್, ಕಿಡಂದಾನ್, ನಡಂದಾನ್ ಎಂಬುದಾಗಿ ಮೂರೂ ವಿಗ್ರಹಗಳನ್ನೂ ಹಾಡಿದ್ದಾರೆ.)

ವಾಲ್ಮೀಕಿ ಮಹರ್ಷಿ ಬೆಟ್ಟದ ಮೇಲಿರುವ ಮೂರೂ ದೇವರನ್ನು ದರ್ಶನ ಮಾಡಿ ಕೆಳಗೆ ಇಳಿದು ಕೆಳಗಿರುವ ನೀರ್ ವಣ್ಣನ್ ದೇವರ ದರ್ಶನ ಮಾಡಿದರು. ಆಗ ರಾಮನ ರೀತಿ ದರ್ಶನ ಬೇಕೆಂದು ಕೇಳಿಕೊಂಡಾಗ ರಂಗನಾಥನು ರಾಮನ ರೀತಿ, ಮಹಾಲಕ್ಷ್ಮಿಯು ಜಾನಕಿ ಮಾತೆಯ ರೀತಿ, ಆದಿಶೇಷನು ಲಕ್ಷ್ಮಣನ ರೀತಿ, ಶಂಕು, ಚಕ್ರ ಶತ್ರುಘ್ನ, ಭರತನ ರೀತಿ, ವಿಶ್ವಸೇನರು ಸುಗ್ರೀವನಂತೆ, ಗರುಡನು ಹನುಮನನಂತೆ ದರ್ಶನ ನೀಡಿದರು.

ತಿರುಮಂಗೈ ಆಳ್ವಾರ್ ಅವರು ಈ ಸ್ಥಳಕ್ಕೆ ಬರುವಾಗಿ ಈ ಬೆಟ್ಟದ ಸುತ್ತಲೂ ನೀರು ತುಂಬಿತ್ತು. ಆರು ತಿಂಗಳ ಕಾಲ ಕಾದಿದ್ದು ಆನಂತರ ಈ ಸ್ಥಳಕ್ಕೆ ಬಂದು ಮಂಗಳಶಾಸನ ಮಾಡಿದರು. ಬೆಟ್ಟದ ಸುತ್ತಲೂ ನೀರು ತುಂಬಿದ್ದರಿಂದ ಈ ಸ್ಥಳಕ್ಕೆ ತಿರುನೀರ್ ಮಲ್ಲೈ ಎಂಬ ಹೆಸರು ಬಂದಿತು.

**ಬೆಟ್ಟದ ಕೆಳಗೆ**

**ಮೂಲವರ್ : ನಿರ್ ವಣ್ಣನ್, ನೀಲಮುಗಿಲ್ ವಣ್ಣನ್**

ತಾಯಾರ್ : ಅನಿಮಾಮಲ ಮಂಗೈ

ಬೆಟ್ಟದ ಮೇಲೆ

1. ಮೂಲವರ್ : ಶಾಂತ ನರಸಿಂಹ
   ತಾಯಾರ್ : ಮಹಾಲಕ್ಷ್ಮಿ
2. ಮೂಲವರ್ : ರಂಗನಾಥ
   ತಾಯಾರ್ :ರಂಗನಾಯಕಿ
3. ಮೂಲವರ್ : ತ್ರಿವಿಕ್ರಮನ್
   ತಾಯಾರ್ : ಶ್ರೀದೇವಿ, ಭೂದೇವಿ

ತೀರ್ಥಂ : ಮಣಿಕರ್ಣಿಕಾ, ಶುರಪುಷ್ಕರಣಿ, ಕಾರುಣ್ಯಪುಷ್ಕರಣಿ, ಸಿದ್ಧ ಪುಷ್ಕರಣಿ, ಸುವರ್ಣ ಪುಷ್ಕರಣಿ (ನಾಲ್ಕು ತೀರ್ಥಗಳು ಸೇರಿದೆ)

ವಿಮಾನಂ : ತೋಯಗಿರಿ

ಪ್ರತ್ಯಕ್ಷಗೊಂಡಿರುವುದು: ತೊಂಡೈಮಾನ್, ಬೃಗು, ಮಾರ್ಕಂಡೇಯ, ವಾಲ್ಮೀಕಿ ಮಹರ್ಷಿ

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್, 2. ಬೂದತ್ತಾಳ್ವಾರ್



# 62. ತಿರುವಿಡಂದೈ

॥ ಓಂ ಶ್ರೀಕೋಮಲವಲ್ಲಿ ಸಮೇತ ಶ್ರೀನಿತ್ಯಕಲ್ಯಾಣ ಸ್ವಾಮಿನೇ ನಮಃ ॥

ಮದ್ರಾಸಿನಿಂದ ಮಹಾಬಲಿಪುರಕ್ಕೆ ಹೋಗುವ ಮಾರ್ಗದಲ್ಲಿ 40 ಕಿ.ಮೀ. ದೂರದಲ್ಲಿದೆ.

ಕಾಲವ ಮಹರ್ಷಿಗೆ 360 ಹೆಣ್ಣು ಮಕ್ಕಳು. ಆ ಮಹರ್ಷಿಯು ದೇವರಲ್ಲಿ ನಾನು ಹೇಗೆ ಈ ಮಕ್ಕಳಿಗೆ ಮದುವೆ ಮಾಡಲಿ ಎಂದು ಕೇಳಿಕೊಂಡಾಗ ದೇವರು ಪ್ರತಿನಿತ್ಯ ಒಬ್ಬೊಬ್ಬರನ್ನು ಮದುವೆಯಾಗುತ್ತಾರೆ. ಕೊನೆಯಲ್ಲಿ 360 ಹೆಣ್ಣು ಮಕ್ಕಳನ್ನೂ ಒಟ್ಟಾಗಿ ಸೇರಿಸಿ ಒಂದೇ ಹೆಣ್ಣು ಮಗುವಾಗಿ ಮಾಡಿ ತನ್ನ ಎಡ ತೊಡೆಯ ಮೇಲೆ ಕುಳ್ಳರಿಸಿಕೊಳ್ಳುತ್ತಾರೆ. ಆದ್ದರಿಂದ ಈ ದೇವರಿಗೆ ನಿತ್ಯ ಕಲ್ಯಾಣರ್ ಎಂಬ ಹೆಸರೂ ಬಂದಿದೆ. ಆದ ಕಾರಣ ಪ್ರಪಂಚದ ಎಲ್ಲಾ ದೇವಾಲಯಗಳಲ್ಲೂ ನಿತ್ಯ ಕಲ್ಯಾಣೋತ್ಸವ ನಡೆಯುತ್ತದೆ.

ಈ ದೇಗುಲದಲ್ಲಿ ಮದುವೆಯಾಗದ ಯುವಕ ಯುವತಿಯರು ಹೂವಿನ ಹಾರವನ್ನು ಹಾಕಿಕೊಂಡು ದೇವರ ಪ್ರದಕ್ಷಿಣೆ ಮಾಡುತ್ತಾರೆ. ಹೀಗೆ ಪ್ರದಕ್ಷಿಣೆ ಮಾಡಿದರೆ ತಮಗೆ ಮದುವೆಯಾಗುತ್ತದೆಂದು ನಂಬಿಕೆ. ಮದುವೆಯಾದನಂತರ ದಂಪತಿ ಸಮೇತ ಮತ್ತೊಮ್ಮೆ ದೇವಾಲಯಕ್ಕೆ ಬಂದು ಸೇವೆ ಮಾಡುತ್ತಾರೆ. ಇದು ಮದುವೆ ಪ್ರಾರ್ಥನಾ ಸ್ಥಳ.

ಮೂಲವರ್ : ಲಕ್ಷ್ಮೀ ವರಾಹ ಪೆರುಮಾಳ್

ಉತ್ಸವರ್ : ನಿತ್ಯ ಕಲ್ಯಾಣರ್, (ಕೆನ್ನೆಯಲ್ಲಿ ಮದುವೆ ಗಂಡಿಗೆ ಇಡುವಂತಹ ದೃಷ್ಟಿ ಬೊಟ್ಟು ಇದೆ)

ತಾಯಾರ್ : ಕೋಮಲವಲ್ಲಿ ನಾಚ್ಚಿಯಾರ್, ಆಂಡಾಳ್

ತೀರ್ಥಂ : ಕಲ್ಯಾಣ ತೀರ್ಥಂ, ವರಾಹ ತೀರ್ಥಂ

ವಿಮಾನಂ : ಕಲ್ಯಾಣ ವಿಮಾನಂ

ಪ್ರತ್ಯಕ್ಷಗೊಂಡಿರುವುದು: ಮಾರ್ಕಂಡೇಯ

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್

# 63. ತಿರುಕ್ಕಡಲ್‌ಮಲ್ಲೈ (ಮಹಾಬಲಿಪುರಂ)

॥ ಓಂ ಶ್ರೀನೀಲಮಂಗಾ ಸಮೇತ ಶ್ರೀಸ್ಥಳಶಯನ ಸ್ವಾಮಿನೇ ನಮಃ ॥

ಮದ್ರಾಸಿನಿಂದ 55 ಕಿ.ಮೀ. ದೂರದಲ್ಲಿ ಸಮುದ್ರ ತೀರದಲ್ಲಿರುವ ಕ್ಷೇತ್ರ ಪ್ರಸಿದ್ಧವಾದ ಪ್ರೇಕ್ಷಣೀಯ ಸ್ಥಳವಾಗಿದ್ದು, ಸಾವಿರಾರು ಪ್ರವಾಸಿಗರು ಬರುತ್ತಾರೆ. ಎಲ್ಲಾ ರೀತಿಯ ಅನುಕೂಲಗಳು ಇವೆ. ಮದ್ರಾಸ್ ಮತ್ತು ಇತರ ಕಡೆಗಳಿಂದ ಹೇರಳವಾಗಿ ಬಸ್ಸುಗಳು ಓಡಾಡುತ್ತವೆ.

ಈ ಕ್ಷೇತ್ರದಲ್ಲಿಯೇ ಶ್ರೀ ಭೂತತ್ತಾಳ್ವಾರ್ ಅವತರಿಸಿದ್ದು ಅವರಿಗೆ ಪ್ರತ್ಯೇಕ ಸನ್ನಿಧಿಯಿದೆ.

ಪುಂಡರೀಕ ಮಹರ್ಷಿ ಒಂದು ಬುಟ್ಟಿಯಲ್ಲಿ ಹೂವನ್ನು ತೆಗೆದುಕೊಂಡು ಆ ಹೂ ಬಾಡುವುದರೊಳಗೆ ಪರಮಾತ್ಮನಿಗೆ ಅರ್ಪಿಸಲು ಹೋಗುತ್ತಿದ್ದರು. ಆ ಸಮಯದಲ್ಲಿ ಸಮುದ್ರದಲ್ಲಿ ಬಹಳ ನೀರು ತುಂಬಿತ್ತು. ಆ ಬುಟ್ಟಿಯನ್ನು ಕೆಳಗಿರಿಸಿ ನೀರನ್ನು ತಳ್ಳುವ ಕಾಯಕದಲ್ಲಿ ತೊಡಗಿದರು. ಅದೇ ಸಮಯಕ್ಕೆ ಅಲ್ಲಿಗೆ ಬಂದ ಒಬ್ಬ ಬ್ರಾಹ್ಮಣ ತನಗೆ ಹಸಿವಾಗುತ್ತಿದೆ ತಿನ್ನಲು ಆಹಾರ ಬೇಕು ಎಂದು ಕೇಳಿದನು. ಅದಕ್ಕೆ ಮಹರ್ಷಿಯು ಸರಿ ನಾನು ಆಹಾರವನ್ನು ತರುತ್ತೇನೆ. ನಾನು ಬರುವವರೆಗೂ ಈ ನೀರನ್ನು ತಳ್ಳುತ್ತಿರು ಎಂದು ಹೇಳಿ ಆಹಾರ ತರಲು ಊರಿಗೆ ಹೊರಟನು.

ಆನಂತರ ಶ್ರೀಮನ್ನಾರಾಯಣ ಸ್ವರೂಪಿಯಾದ ಬ್ರಾಹ್ಮಣನು ಆ ಸ್ಥಳವನ್ನು ನೀರಿಲ್ಲದಂತೆ ಮಾಡಿ ಹೂವುಗಳಿಂದ ಅಲಂಕೃತನಾಗಿ ಅದೇ ಸ್ಥಳದಲ್ಲಿಯೇ ನೆಲದ ಮೇಲೆಯೇ ಮಲಗಿಕೊಂಡರು. ಆಹಾರ ತರಲು ಹೋಗಿದ್ದ ಪುಂಡರೀಕಾಕ್ಷನು ಹಿಂತಿರುಗಿ ಬಂದು, ಶ್ರೀಮನ್ನಾರಾಯಣ ಸ್ವಾಮಿಯು ಹೂವಿನ ಅಲಂಕಾರದಿಂದ ಕಂಗೊಳಿಸುತ್ತಿರುವುದನ್ನು ನೋಡಿ "ಮಹಾ ಸ್ವಾಮಿ, ನಿಮಗೆ ನಾನು ಕೆಲಸ ಹೇಳಿದ್ದೇನೆಯೇ? ದಯವಿಟ್ಟು ನನ್ನನ್ನು ಕ್ಷಮಿಸಿ" ಎಂದರು. ಆಗ ಸ್ವಾಮಿಯು "ನೀನು ಹೂವು ಬಾಡುವುದರೊಳಗೆ ನನ್ನನ್ನು ಅಲಂಕರಿಸಬೇಕೆಂದು ಪಡುತ್ತಿರುವ ಕಷ್ಟವನ್ನು ನೋಡಿ ನಾನು ಬಹಳ ಸಂತೋಷ ಪಟ್ಟೆನು. ನಿನ್ನ ಭಕ್ತಿಗೆ ಮೆಚ್ಚಿದೆನು. ನೀನು ತಂದಿರುವ ಆಹಾರವನ್ನು ನನಗೆ ನೈವೇದ್ಯ ಮಾಡು" ಎಂದು ಹೇಳಿದರು. ಮಹರ್ಷಿಯು ತಾನು ತಂದಿದ್ದ

ಆಹಾರವನ್ನೇ ನೈವೇದ್ಯ ಮಾಡಿದರು.

ನೆಲದ ಮೇಲೆ ಮಲಗಿರುವ ರಂಗನಾಥನಿಗೆ ಸ್ಥಳ ಶಯನ ಪೆರುಮಾಳ್ ಎಂಬ ಹೆಸರು ಬಂದಿತು.

ಮೂಲವರ್ : ಸ್ಥಳ ಶಯನ ಪೆರುಮಾಳ್

ಉತ್ಸವರ್ : ಉಲಗೊಯ್ಯನಿಂಡ್ರ ಪೆರುಮಾಳ್

ತಾಯಾರ್ : ನೀಲಮಂಗೈ ತಾಯಾರ್

ತೀರ್ಥಂ : ಪುಂಡರೀಕ ಪುಷ್ಕರಣಿ, ಗರುಡ ನದಿ

ವಿಮಾನಂ : ಸಹನಾಕೃತಿ ವಿಮಾನಂ

ಪ್ರತ್ಯಕ್ಷಗೊಂಡಿರುವುದು: ಪುಂಡರೀಕ ಮಹರ್ಷಿ

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್, 2. ಬೂತತ್ತಾಳ್ವಾರ್

## 64. ತಿರುಕಡಿಗೈ (ಕಡಿಗಾಚಲಂ)

॥ ಓಂ ಶ್ರೀಅಮೃತವಲ್ಲಿ ಸಮೇತ ಶ್ರೀಯೋಗನರಸಿಂಹ ಸ್ವಾಮಿನೇ ನಮಃ ॥

ಅರಕೋಣಂ ಕಾಟ್ಪಾಡಿ ನಡುವೆ ಶೋಲಿಂಗೂರ್ ರೈಲ್ವೆ ಸ್ಟೇಷನ್ನಿನಿಂದ 12 ಕಿಮೀ ದೂರದಲ್ಲಿ ಈ ದಿವ್ಯ ಕ್ಷೇತ್ರವಿದೆ. ಇದನ್ನು ಕಡಿಗಾಚಲ, ಶೋಲಿಂಘರ್, ಚೋಳಸಿಂಗಪುರಂ ಎಂಬ ಹೆಸರುಗಳಿಂದ ಕರೆಯುತ್ತಾರೆ.

ದೇವಸ್ಥಾನವು 400 ಅಡಿ ಎತ್ತರವಿರುವ ಬೆಟ್ಟದ ಮೇಲಿದೆ. ಬೆಟ್ಟದ ಕೆಳಗಿರುವ ಎಲ್ಲ ನಗರಗಳಿಂದಲೂ ಬಸ್ಸುಗಳು ಬರುತ್ತವೆ. ಮೇಲೆ ಹೋಗುವುದಕ್ಕೆ 1300 ಮೆಟ್ಟಿಲುಗಳಿದ್ದು ಸುಲಭವಾಗಿ ಹತ್ತಿ ಹೋಗಬಹುದು.

ಇಲ್ಲಿಯ ಯೋಗಾನರಸಿಂಹರು ರೋಗಪೀಡಾದಿಗಳ ಪರಿಹಾರಕ್ಕೆ ಪ್ರಸಿದ್ಧಿ. ವ್ಯಾಧಿಗ್ರಸ್ಥರು, ಪಿಶಾಚಿಗ್ರಸ್ಥರು ಪರಿಹಾರಕ್ಕಾಗಿ ಇಲ್ಲಿಗೆ ಅಸಂಖ್ಯಾತರಾಗಿ ಬರುವರು. ವಾಸಿಯಾಗದ ರೋಗಗಳೂ ಇಲ್ಲಿ ವಾಸಿಯಾಗುತ್ತವೆ. ಪಿಶಾಚಿಗಳು ಓಡಿಹೋಗುತ್ತವೆ ಎಂಬ ನಂಬಿಕೆ.

ನರಸಿಂಹರಿಂದ ಸ್ವತಂತ್ರವನ್ನು ಪಡೆದ ಆಂಜನೇಯನು ಈ ಕ್ಷೇತ್ರದ ಪಕ್ಕದಲ್ಲಿನ 200 ಅಡಿ ಎತ್ತರವಿರುವ ಬೆಟ್ಟದ ಮೇಲೆ ಒಂಟಿಯಾಗಿ ದಯ ಮಾಡಿಸಿದ್ದಾನೆ. ಈ ಆಂಜನೇಯ ದೇವಾಲಯವು ನರಸಿಂಹ ದೇವಾಲಯಕ್ಕೆ ಅಭಿಮುಖವಾಗಿದೆ. ಈ ಬೆಟ್ಟದ ಮೇಲೆ ಹತ್ತಿ ಹೋಗಲು 420 ಮೆಟ್ಟಿಲುಗಳಿವೆ. ಆಂಜನೇಯನ ಕೈಯಲ್ಲಿ ಶಂಖ, ಚಕ್ರಗಳಿವೆ. ಈತ ಸ್ವಪ್ನಗಳ ಮುಖಾಂತರ ವ್ಯಾಧಿಗಳಿಗೆ ಪರಿಹಾರ ಸೂಚಿಸುತ್ತಾನೆ ಎಂಬ ನಂಬಿಕೆ ಜನರಲ್ಲಿದೆ. ಈ ದೇವರನ್ನು ಯೋಗಾ ಆಂಜನೇಯ ಎಂದೂ ಕರೆಯುತ್ತಾರೆ.

ಬೆಟ್ಟದ ಕೆಳಗೆ ತಪ್ಪಲಿನಲ್ಲಿ ತಕ್ಕಾನ್ ಕೊಳದ ಪಕ್ಕದಲ್ಲಿ ಗರುಡಾರೂಢನಾದ ವರದರಾಜನ ದೇವಾಲಯವಿದೆ. ಹಿಂದೆ ಇಲ್ಲಿ ದೊಡ್ಡಯ್ಯಚಾರ್ಯರೆಂಬ ಓರ್ವ ಭಾಗವತ್ತೋಮರು ಇದ್ದರಂತೆ. ಇವರು ಪ್ರತಿ ವರ್ಷವೂ ಕಂಚಿಗೆ ವರದರಾಜನ ಗರುಡ ಸೇವೆಗೆ ಹೋಗುತ್ತಿದ್ದರಂತೆ. ವೃದ್ಧಾಪ್ಯದ ಕಾರಣ ಅವರು ಕಂಚಿಗೆ ಹೋಗಲಾಗಲಿಲ್ಲ. ತಮಗೆ ಇಲ್ಲಿಯೇ ಸೇವೆ ಮಾಡುವ ಸೌಭಾಗ್ಯ ನೀಡಬೇಕೆಂದು ವರದರಾಜನನ್ನು ಪ್ರಾರ್ಥಿಸಿದರು. ಅಂತೆಯೇ ಆ ಪರಮಾತ್ಮನು ಇಲ್ಲಿ ದರ್ಶನವಿತ್ತನೆಂದು ಐತಿಹ್ಯ.

ಇಲ್ಲಿ ವಿಶ್ವಾಮಿತ್ರರು ಒಂದು ಘಡಿ (ಅರ್ಧ ಗಂಟೆ) ಕಾಲ ತಪಸ್ಸು ಮಾಡಿ ಬ್ರಹ್ಮರ್ಷಿ ಎಂಬ ಪಟ್ಟವನ್ನು ಪಡೆದರು. ಆದ್ದರಿಂದ ಈ ಸ್ಥಳವನ್ನು ತಿರುಘಟಿಕೈ ಎಂಬ ಹೆಸರನ್ನು ಪಡೆಯಿತು.

ಮೂಲವರ್ : ಯೋಗ ನರಸಿಂಹ ಮತ್ತು ಆಂಜನೇಯ ಸ್ವಾಮಿ

ತಾಯಾರ್ : ಅಮೃತವಲ್ಲಿ

ತೀರ್ಥಂ : ಬ್ರಹ್ಮ ತೀರ್ಥಂ, ತಕ್ಕಾನ್ ಕೊಳಂ

ವಿಮಾನಂ : ಸಿಂಹಕೋಷ್ಟಾಕೃತಿ, ಹೇಮಕೋಟಿ

ಪ್ರತ್ಯಕ್ಷಗೊಂಡಿರುವುದು: ಶಿರಿಯ ತಿರುವಡಿ (ಆಂಜನೇಯ)

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್, 2. ಪೇಯ್ ಆಳ್ವಾರ್

ತೊಂಡೈನಾಡು ದಿವ್ಯದೇಶಗಳು ಸಮಾಪ್ತಿ

# ವಡನಾಟ್ಟು ತಿರುಪತಿಗಳು

## 65. ತಿರುವಯೋಧ್ಯಾ (ಅಯೋಧ್ಯೆ)

॥ ಓಂ ಶ್ರೀಸೀತಾದೇವಿ ಸಮೇತ ಶ್ರೀರಾಮ ಸ್ವಾಮಿನೇ ನಮಃ ॥

"ಅಯೋಧ್ಯಾ ಮಥುರಾ, ಗಯಾ, ಕಾಶೀ ಕಾಂಚಿ, ಅವಂತಿಕೇ ತಥಾ ಪುರಿ ದ್ವಾರವತಿ ಚೈವ ಸಪ್ತೈತೇ ಮೋಕ್ಷದಾಯಿಕಾ" ಎಂಬಂತೆ ಭಾರತ ದೇಶದ 'ಸಪ್ತ ಮೋಕ್ಷ ಕ್ಷೇತ್ರ' ಗಳಲ್ಲಿ ಅಯೋಧ್ಯೆ ಮೊದಲನೆಯದು.

ಪೈಜಿಲಾಬಾದ್ (ಉತ್ತರಪ್ರದೇಶ) ಸ್ಟೇಷನ್ ಇಂದ 4ಕಿ.ಮೀ. ದೂರದಲ್ಲಿದೆ. ಅಯೋಧ್ಯೆಯಲ್ಲಿಯೂ ಸಹ ರೈಲ್ವೆಸ್ಟೇಷನ್ ಇದೆ. ಭರತ ಖಂಡದಲ್ಲಿ ಇರುವ ಹಿಂದೂಗಳ ಆರಾಧ್ಯ ದೈವವಾದ ಶ್ರೀರಾಮನ ಜನ್ಮಸ್ಥಳ. ಸರಯೂ ನದಿ ಹರಿಯುತ್ತದೆ. ಶ್ರೀರಾಮನ ಕಾಲದಲ್ಲಿ ಇದ್ದು, ಈಗಲೂ ಇರುವುದೆಂದರೆ ಸರಯೂ ನದಿ ಒಂದೇ. ಸರಯೂ ನದಿ ತೀರದಲ್ಲಿಯೇ ದಕ್ಷಿಣ ಭಾರತ ಶೈಲಿಯ ಶ್ರೀರಾಮನ ದೇವಸ್ಥಾನವಿದೆ.

ಈ ಸ್ಥಳದಲ್ಲಿ ಶ್ರೀರಾಮನು, ಲವಕುಶರಿಗೆ ಪಟ್ಟಾಭಿಷೇಕ ಮಾಡಿ ಸರಿಯೂ ನದಿಯಲ್ಲಿ ಇಳಿದು ವೈಕುಂಠಕ್ಕೆ ಪಯಣಿಸುತ್ತಾನೆ. ಆಂಜನೇಯನೂ ಜೊತೆಗೆ ಹೋದಾಗ ರಾಮನು ಹನುಮಂತನಿಗೆ ನೀನು ಇಲ್ಲಿಯೇ ಇರು. ಈಗ ಬರಬೇಡ ಎಂದು ಹೇಳಿದರು.

ಮೂಲವರ್ : ಶ್ರೀ ರಾಮ, ಚಕ್ರವರ್ತಿ ತಿರುಮಗನ್, ರಘುನಾಯಕ

ತಾಯಾರ್ : ಸೀತಾ ದೇವಿ

ತೀರ್ಥಂ : ಸರಯೂ ನದಿ

ವಿಮಾನಂ : ಪುಷ್ಕಳ ವಿಮಾನಂ

ಪ್ರತ್ಯಕ್ಷಗೊಂಡಿರುವುದು: ಭರತ, ದೇವಾದಿ ದೇವತೆಗಳು, ಮುನಿಗಳು

ಮಂಗಳಶಾಸನ ಮಾಡಿರುವವರು :

1. ಪೆರಿಯಾಳ್ವಾರ್, 2. ಕುಲಶೇಖರ ಆಳ್ವಾರ್, 3. ತೊಂಡರಡಿಪ್ಪಡಿ ಆಳ್ವಾರ್, 4. ತಿರುಮಂಗೈಆಳ್ವಾರ್, 5. ನಮ್ಮಾಳ್ವಾರ್

# 66. ನೈಮಿಷಾರಣ್ಯಂ

॥ ಓಂ ಶ್ರೀಹರಿಲಕ್ಷ್ಮಿ ಸಮೇತ ಶ್ರೀದೇವರಾಜ ಸ್ವಾಮಿನೇ ನಮಃ ॥

ನಿಮ್‌ಸಾರ್ ಎಂಬ ರೈಲ್ವೆ ಸ್ಟೇಷನ್ ಇಂದ 2ಕಿ.ಮೀ. ದೂರದಲ್ಲಿದೆ. ನಿಮ್‌ಸಾರ್ ಎನ್ನುವುದು ಪೂರ್ವ ರೈಲ್ವೆಯ ಪಲಮು ಮತ್ತು ಸೀತಾಪುರ ನಡುವೆ ಇದೆ.

ಪರಮಾತ್ಮನು ಅರಣ್ಯ ರೂಪಿಯಾಗಿಯೇ ಇಲ್ಲಿ ವಾಸಿಸುತ್ತಿದ್ದಾನೆಂದು ಐತಿಹ್ಯ.

ನೈಮಿಷಾರಣ್ಯ ಬಗ್ಗೆ ಕೂರ್ಮಪುರಾಣ, ವಾಯುಪುರಾಣ, ಪದ್ಮಪುರಾಣ ಮುಂತಾದ ಪುರಾಣಗಳಲ್ಲಿ ಉಲ್ಲೇಖಿತವಾಗಿದೆ. ಈ ಕ್ಷೇತ್ರದಲ್ಲಿ ಮಾಡಿದ ಯಜ್ಞ-ಯಾಗ, ತಪಸ್ಸು ಮತ್ತು ದಾನಾದಿಗಳು ಏಳೇಳು ಜನ್ಮಗಳ ಪಾಪಗಳನ್ನೂ ನಾಶಪಡಿಸುತ್ತವೆಂದು ಸ್ಥಳಮಾಹಾತ್ಮ್ಯ ತಿಳಿಸುತ್ತದೆ.

ಮಹರ್ಷಿ ಶೌನಕರ ಮನಸ್ಸಿನಲ್ಲಿ ಬಹುಕಾಲ ಜ್ಞಾನಸತ್ರವನ್ನು ನಡೆಸಬೇಕೆಂದು ಇಚ್ಛೆಯುಂಟಾಯಿತು. ಹಾಗಾಗಿ ಅವರು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿದಾಗ, ಬ್ರಹ್ಮದೇವನು ಮನೋಮಯವಾದ ಚಕ್ರವನ್ನು ಸೃಷ್ಟಿಸಿ. ಇದರ ನೇಮಿ(ಚಕ್ರದ ಪಟ್ಟಿ)ಯು ಎಲ್ಲಿ ಕಳಚಿ ಬೀಳುತ್ತದೆಯೋ ಆ ಸ್ಥಳದಲ್ಲಿ ನೀವು ಆಶ್ರಮ ನಿರ್ಮಿಸಿ, ಅಲ್ಲಿ ಜ್ಞಾನಸತ್ರನಡೆಸಿ" ಎಂದನು ಅದು ಗೋಮತಿ ನದಿಯ ದಡದಲ್ಲಿರುವ ಒಂದು ತಪೋವನದಲ್ಲಿ ಅದರ ನೇಮಿಯು ಕಳಚಿಬಿದ್ದಿತು. ಆ ಸ್ಥಳದಲ್ಲಿ 'ಚಕ್ರತೀರ್ಥ' ಉಂಟಾಯಿತು. ಪವಿತ್ರವಾದ ಗೋಮತಿ ನದಿಯು ದಡದಲ್ಲಿಯೇ ಈ ತೀರ್ಥವಿದೆ.

ಈ ಕ್ಷೇತ್ರದಲ್ಲಿಯೇ ಸೂತ ಪುರಾಣಿಕರು ಶೌನಕಾದಿ ಮಹರ್ಷಿಗಳಿಗೆ ಅಷ್ಟಾದಶ ಪುರಾಣಗಳನ್ನೂ, ಮಹಾಭಾರತವನ್ನೂ ಕಾಲಕ್ಷೇಪ ಮಾಡಿದರು. (ಈಗಲೂ ಇಲ್ಲಿರುವ ಯಾವುದೋ ಒಂದು ಗುಪ್ತ ಸ್ಥಳದಲ್ಲಿ ಋಷಿಗಳ ಪ್ರವಚನ ನಡೆಯುತ್ತಿದೆಯೆಂದು ವಾಯುಪುರಾಣದ ಮಾಘ ಮಹಾತ್ಮೆಯಲ್ಲಿ ಹೇಳಲಾಗಿದೆ.) ಇತ್ತೀಚೆಗೆ ಒಂದು ದೇವಸ್ಥಾನವಿದ್ದು, ದಕ್ಷಿಣ ಭಾರತದ ಶೈಲಿಯಲ್ಲಿ ಪೂಜೆ ನಡೆಯುತ್ತಿದೆ.

ಚಕ್ರತೀರ್ಥವೆಂಬ ತೀರ್ಥವಿದ್ದು, ಗೋಮತಿ ನದಿಯೂ ಹರಿಯುತ್ತದೆ.

ಭಕ್ತಾದಿಗಳು ನದಿಯಲ್ಲಿ, ತೀರ್ಥದಲ್ಲಿ ಸ್ನಾನ ಮಾಡಿ ಅರಣ್ಯಕ್ಕೆ ಪೂಜೆ ಸಲ್ಲಿಸುತ್ತಾರೆ. ಚಿರಂಜೀವಿಯಾದ ಶ್ರೀ ವ್ಯಾಸಮಹರ್ಷಿಯು ಈಗಲೂ ಇಲ್ಲಿ ತಪಸ್ಸು ಮಾಡುತ್ತಿರುವ ನಂಬಿಕೆ ಇದೆ. 'ವ್ಯಾಸಗದ್ದಿ' ಎಂದು ಕರೆಯುತ್ತಾರೆ.

ಮೂಲವರ್ : ದೇವರಾಜ

ತಾಯಾರ್ : ಶ್ರೀಹರಿಲಕ್ಷ್ಮಿ (ಪುಂಡರೀಕವಲ್ಲಿ)

ತೀರ್ಥಂ : ಚಕ್ರ ತೀರ್ಥಂ, ಗೋಮತಿ ನದಿ

ಸ್ಥಳ ವೃಕ್ಷಂ : ತಪೋವನಂ

ವಿಮಾನಂ : ಶ್ರೀಹರಿ ವಿಮಾನಂ

ಪ್ರತ್ಯಕ್ಷಗೊಂಡಿರುವುದು: ಇಂದ್ರ, ದೇವರ್ಷಿ, ಸೂತಪುರಾಣಿಕರು, ವೇದವ್ಯಾಸರು

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್

## 67. ತಿರುಪ್ಪಿರಿತಿ (ಜೋಷಿಮಠ)

**॥ ಓಂ ಶ್ರೀಪರಿಮಳವಲ್ಲಿ ಸಮೇತ ಶ್ರೀಪರಮಪುರುಷ ಸ್ವಾಮಿನೇ ನಮಃ ॥**

ಇದು ಬದರಿಗೆ ಹೋಗುವ ಮಾರ್ಗದಲ್ಲಿದೆ. ಚಳಿಗಾಲದಲ್ಲಿ ಬದರಿ ನಾರಾಯಣನ ಉತ್ಸವ ಮೂರ್ತಿಯನ್ನು ಇಲ್ಲಿ ತಂದು ಆರು ತಿಂಗಳುಗಳ ಕಾಲ ಪೂಜಿಸುತ್ತಾರೆ. ಇಲ್ಲಿ ಒಂದು ಶಂಕರಮಠವಿದ್ದು, ಅಲ್ಲಿ ನರಸಿಂಹ ಸಾಲಿಗ್ರಾಮವಿದೆ. ಈ ಸ್ಥಳದಲ್ಲಿ ಭಗವಂತನು ತುಂಬಾ ಪ್ರೀತಿಯಿಂದ ಬಂದು ನಿಂತಿರುವುದರಿಂದ ತಿರುಪ್ಪಿರಿತಿ ಎಂಬ ಹೆಸರು ಬಂದಿದೆ.

**ಮೂಲವರ್ : ಪರಮಪುರುಷ**

**ತಾಯಾರ್ : ಪರಿಮಳವಲ್ಲಿ**

**ತೀರ್ಥಂ : ಇಂದ್ರ ತೀರ್ಥಂ, ಗೋವರ್ಧನ ತೀರ್ಥಂ, ಮಾನಸ ಸರಸ್**

**ವಿಮಾನಂ : ಗೋವರ್ಧನ ವಿಮಾನಂ**

**ಪ್ರತ್ಯಕ್ಷಗೊಂಡಿರುವುದು : ಪಾರ್ವತಿ**

**ಮಂಗಳಶಾಸನ ಮಾಡಿರುವವರು :**

**1. ತಿರುಮಂಗೈಆಳ್ವಾರ್**

# 68. ತಿರುಕ್ಕಂಡಂ ಏನುಂ ಘಟಿನಗರ್(ದೇವಪ್ರಯಾಗ)

**॥ ಓಂ ಶ್ರೀಪುಂಡರೀಕವಲ್ಲಿ ಸಮೇತ ಶ್ರೀಪುರುಷೋತ್ತಮ ಸ್ವಾಮಿನೇ ನಮಃ ॥**

ಹರಿದ್ವಾರದಿಂದ ಬದರಿಗೆ ಹೋಗುವ ಮಾರ್ಗದಲ್ಲಿದೆ. ಹರಿದ್ವಾರದಿಂದ 100ಕಿ.ಮೀ. ದೂರದಲ್ಲಿ ಅಲಕನಂದಾ ಮತ್ತು ಭಾಗೀರಥಿ ನದಿಗಳ ಸಂಗಮವಾಗುವ ಸ್ಥಳ ಪ್ರಯಾಗ. ಈ ಸ್ಥಳದಲ್ಲಿ ಬ್ರಹ್ಮನು ಯಾಗ ಮಾಡಿದ ಕಾರಣ ಪ್ರಯಾಗ ಎಂಬ ಹೆಸರೂ ಬಂದಿದೆ. ದೇವಾದಿದೇವರು ಈ ಸ್ಥಳದಲ್ಲಿ ಪಿತೃಕಾರ್ಯಗಳನ್ನು ಮಾಡಿದರು. ಆದ ಕಾರಣ ದೇವಪ್ರಯಾಗ್ ಎಂಬ ಹೆಸರು ಬಂದಿತು. ಪಂಚಪಾಂಡವರು ಯುದ್ಧದಲ್ಲಿ 101 ಕೌರವರನ್ನು ಹತ್ಯೆ ಮಾಡಿದ್ದರಿಂದ ಈ ಸ್ಥಳದಲ್ಲಿ ಪಿಂಡ ಪ್ರದಾನ ಮಾಡಿ ಇಲ್ಲಿಂದ ಸ್ವರ್ಗಕ್ಕೆ ಹೊರಟರು.

ಈ ದೇವಸ್ಥಾನದ ಪ್ರತಿಮೆಯನ್ನು ಶಂಕರಾಚಾರ್ಯರು ಸ್ಥಾಪಿಸಿರುವುದು. ಈ ಸ್ಥಳದ ದೇವರ ಹೆಸರು ಪುರುಷೋತ್ತಮ. ಇದನ್ನು ರಘುನಾಥ್‌ಜಿ ಮಂದಿರ್ ಎಂದೂ ಕರೆಯುತ್ತಾರೆ.

**ಮೂಲವರ್ : ಪುರುಷೋತ್ತಮ**

**ತಾಯಾರ್ : ಪುಂಡರೀಕವಲ್ಲಿ**

**ತೀರ್ಥಂ : ಮಂಗಳ ತೀರ್ಥಂ, ಗಂಗಾ ನದಿ, ಅಲಕಾನಂದ, ಭಾಗೀರಥಿ**

**ವಿಮಾನಂ : ಮಂಗಳ ವಿಮಾನಂ**

**ಪ್ರತ್ಯಕ್ಷಗೊಂಡಿರುವುದು : ಭರದ್ವಾಜ ಮುನಿ, ಬ್ರಹ್ಮ**

**ಮಂಗಳಶಾಸನ ಮಾಡಿರುವವರು :**

**1. ಪೆರಿಯಾಳ್ವಾರ್ 2. ತಿರುಮಂಗೈಆಳ್ವಾರ್**



# 69. ಬದರಿಕಾಶ್ರಮ (ಬದರೀನಾಥ)

**॥ ಓಂ ಶ್ರೀಅರವಿಂದವಲ್ಲಿ ಸಮೇತ ಶ್ರೀಬದ್ರಿನಾರಾಯಣ ಸ್ವಾಮಿನೇ ನಮಃ ॥**

ಹಿಮಾಲಯ ಪರ್ವತ ಶ್ರೇಣಿಗಳ ನಡುವೆ ಸಮುದ್ರ ಮಟ್ಟದಿಂದ 10500 ಅಡಿಗಳ ಎತ್ತರದಲ್ಲಿರುವ ಪುರಾಣ ಪ್ರಸಿದ್ಧವಾದ ತೀರ್ಥಕ್ಷೇತ್ರ. ಈಗ ದೇವಸ್ಥಾನದವರೆಗೂ ಬಸ್ಸುಗಳು ಸಂಚರಿಸುತ್ತದೆ. ಹೃಷೀಕೇಶದಿಂದ ಬಸ್ಸಿನಲ್ಲಿ ಪ್ರಯಾಣ ಮಾಡಬೇಕು.

ಶ್ರೀಮನ್ನಾರಾಯಣನು, ಈ ಕ್ಷೇತ್ರದಲ್ಲಿ ನರನಿಗೆ ಅಷ್ಟಾಕ್ಷರ ಮಂತ್ರವನ್ನು ಉಪದೇಶಿಸಿದನೆಂದು ವಿವರಣೆ ಇದೆ. (ಇಲ್ಲಿ ಬದರೀ ವೃಕ್ಷವಿದೆ – ಯಲಚೇನಹಣ್ಣಿನ ಮರ) ಮಹಾಲಕ್ಷ್ಮಿಗೆ ಬಹಳ ಇಷ್ಟವಾದ ಯಲಚೇನಹಣ್ಣಿನ ಮರದ ಕೆಳಗೆ ಆಶ್ರಮ ಮಾಡಿಕೊಂಡಿದ್ದರಿಂದ ಬದ್ರಿಕಾ ಆಶ್ರಮವೆಂದು ಹೆಸರು.

ಇಲ್ಲಿನ ಅರ್ಚಕರು ಕೇರಳ ದೇಶದ ನಂಬೂದರಿ ಬ್ರಾಹ್ಮಣರು.

ಮನುಷ್ಯ ಜನ್ಮದಲ್ಲಿ ಒಂದು ಬಾರಿಯಾದರೂ ಬದರಿ ಯಾತ್ರೆ ಮಾಡಲೇಬೇಕು. ಹಿಮಾಲಯದ ವನಸಿರಿ ಸಂಪತ್ತು, ಭೋರ್ಗರೆದು ಹರಿಯುವ ಅಲಕನಂದಾ, ಸರಸ್ವತಿ ನದಿಗಳ ರುದ್ರ ರಮಣೀಯ ಸೊಬಗು– ಇವುಗಳನ್ನು ನೋಡುವುದೇ ನೇತ್ರಾನಂದಕರ. ಇದೂ ಅಲ್ಲದೆ ಆಧ್ಯಾತ್ಮಿಕವಾಗಿಯೂ, ಆತ್ಮಾನಂದವನ್ನು ನೀಡುವಂತಹ ದಿವ್ಯವಾದ ಕ್ಷೇತ್ರ ಬದರೀ ಕ್ಷೇತ್ರ.

ಶಿವನ ಬ್ರಹ್ಮಕಲಾಪವು ಅಲ್ಲಿ ಕೆಳಗೆ ಬಿದ್ದು ಒಡೆದುಹೋಗಿ ಅವರ ಶಾಪ ವಿಮೋಚನೆಯಾಯಿತು. ಆದ ಕಾರಣ ಈ ಸ್ಥಳದಲ್ಲಿ ನಮ್ಮ ಪಿತೃಗಳಿಗೆ ಪಿಂಡಪ್ರದಾನ ಮಾಡುವುದು ತುಂಬಾ ವಿಶೇಷ.

ಮೂಲವರ್ : ಬದರಿ ನಾರಾಯಣ
ತಾಯಾರ್ : ಅರವಿಂದವಲ್ಲಿ
ತೀರ್ಥಂ : ತಪ್ತಕುಂಡಂ
ಸ್ಥಳ ವೃಕ್ಷಂ : ಬದರಿ (ಯಲಚೇನಹಣ್ಣಿನ ಮರ)
ವಿಮಾನಂ : ತಪ್ತಕಾಂಚನ ವಿಮಾನಂ
ಪ್ರತ್ಯಕ್ಷಗೊಂಡಿರುವುದು: ನರ

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್, 2. ಪೆರಿಯಾಳ್ವಾರ್

# 70. ತಿರುಸಾಲಗ್ರಾಮಂ (ಮುಕ್ತಿನಾಥ್)

॥ ಓಂ ಶ್ರೀದೇವಿ ಸಮೇತ ಶ್ರೀಮೂರ್ತಿ ಸ್ವಾಮಿನೇ ನಮಃ ॥

ನೇಪಾಳದ ರಾಜಧಾನಿಯಾದ ಕಠ್ಮಂಡುವಿನಿಂದ ಪೋಕ್ರಾಗೆ 275 ಕಿಮೀ. ದೂರದಲ್ಲಿ ಗಂಡಕಿ ನದಿಯ ತೀರದಲ್ಲಿರುವ ದಿವ್ಯಕ್ಷೇತ್ರ. ಹಿಮಾಲಯದ ಬೆಟ್ಟಗಳ ನಡುವೆ ಇರುವುದರಿಂದ ಪ್ರಯಾಣ ಸ್ವಲ್ಪ ದುಸ್ತರವೆ, ನೇಪಾಳ ಸರ್ಕಾರದ ಪೂರ್ವಾನುಮತಿ ಬೇಕು.

ಒಬ್ಬೊಬ್ಬರೇ ಹೋಗುವುದಂತೂ ಸಾಧ್ಯವೇ ಇಲ್ಲ. ಗುಂಪಾಗಿ ಹೋಗಿ ಸಂದರ್ಶಿಸಲು ಮಾತ್ರ ಅನುಮತಿ ನೀಡುತ್ತಾರೆ. ಮುಕ್ತಿನಾರಾಯಣನ ಕ್ಷೇತ್ರವನ್ನೇ 'ಸಾಲಿಗ್ರಾಮ ಕ್ಷೇತ್ರ'ವೆನ್ನುತ್ತಾರೆ. (ಪೋಕ್ರಾದಿಂದ ಜೆಮ್‌ಸಮ್‌ಗೆ ಹೆಲಿಕಾಪ್ಟರ್, ಜೀಪ್, ಮಿನಿ ಬಸ್‌ಗಳಲ್ಲಿ ತೆರಳಬಹುದು. ಜೆಮ್‌ಸಮ್‌ನಿಂದ 15 ಕಿಮೀ. ನಡೆದು ಹೋಗಬಹುದು ಅಥವಾ ಜೀಪ್‌ನಲ್ಲಿ ಹೋಗಬಹುದು.)

ಸಾಲಿಗ್ರಾಮ ಕ್ಷೇತ್ರವು ಸ್ವಯಂ ವ್ಯಕ್ತ ಕ್ಷೇತ್ರಗಳೆಲ್ಲಾ ಅತ್ಯಂತ ಮಹತ್ವದ್ದಾಗಿದ್ದು, ಇಲ್ಲಿ ಪರಮಾತ್ಮನು ನಿತ್ಯ ಸಾನಿಧ್ಯದಲ್ಲಿದ್ದಾನೆಂದು ಹಿರಿಯರು ಹೇಳುತ್ತಾರೆ. ಇಲ್ಲಿ ಆರಾಧನೆಯು ಯಾವುದಾದರೂ ಕಾರಣಕ್ಕೆ ತಪ್ಪಿದರೂ ಪುನಃ ಸಂಪ್ರೋಕ್ಷಣೆಯ ಅಗತ್ಯವಿಲ್ಲ. ಗಂಡಕೀ ನದಿಯ ನೂರೆಂಟು ಧಾರೆಗಳು ಮಹಾನಂದಿಯ ಬಾಯಿಯ ಮುಖಾಂತರ ದೇವಸ್ಥಾನದ ಸುತ್ತಲೂ ಇದ್ದು, ಸ್ನಾನ ಮಾಡಬಹುದು. ಗಂಡಕಿ ನದಿಯ ಉಗಮ ಸ್ಥಾನವು ಯಾರಿಗೂ ತಿಳಿದಿಲ್ಲ. ಈ ನದಿಯ ನೀರು ಬಹಳ ಶೀತಲವಾಗಿದೆ. ಸ್ನಾನಾನಂತರ ದೇಗುಲದ ಮುಂದಿರುವ ಪಾಪ ಕುಂಡದಲ್ಲಿ ಮುಳುಗೆದ್ದು ಪುಣ್ಯ ಕುಂಡದಲ್ಲಿ ಮುಳುಗಿದನಂತರ ವಸ್ತ್ರಗಳನ್ನು ಬದಲಾಯಿಸಿ ದೇವರ ದರ್ಶನ ಮಾಡಬೇಕು. ಆ ಸಮಯದಲ್ಲಿ ನಿಮ್ಮ ಪೂರ್ವಜನ್ಮದ ಪುಣ್ಯದ ಫಲವೋ, ನಿಮ್ಮ ಕುಟುಂಬದವರ (ತಂದೆ, ತಾಯಿ, ಅತ್ತೆ, ಮಾವ, ಗಂಡ, ಹೆಂಡತಿ, ಮಕ್ಕಳು) ಪುಣ್ಯದ ಫಲವೋ ಎನ್ನುವಂತೆ ನಿಮಗೆ ಪಾಪ ವಿಮೋಚನೆಯಾಗಿ ಪುಣ್ಯ ಸಂಪಾದನೆಯಾಗಿ ಮುಕ್ತಿನಾರಾಯಣನ ದರ್ಶನವಾಗುವುದು. ಆ ಅನಿರ್ವಚನೀಯ ಅನುಭವವನ್ನು ತಾವು ಸ್ವತಃ ಅನುಭವಿಸುತ್ತೀರ. (ಇದೇ ಸಮಯದಲ್ಲಿ 108 ದಿವ್ಯ ದೇಶ ದರ್ಶನ ಮಾಡಿಸಿರುವ ಶ್ರೀ ಗಾಂಧೀ ಟೂರ್ಸ್

ಅವರನ್ನು ನೆನೆಯುವುದು ಖಂಡಿತ) ಮುಕ್ತಿ ನಾರಾಯಣನ ದರ್ಶನವಾಗುವುದು ನಿಜವಾಗಿಯೂ ತಮ್ಮ ಪೂರ್ವಜನ್ಮದ ಸುಕೃತ.

॥ ಓಂ ನಮೋ ನಾರಾಯಣ ॥ ॥ ಓಂ ನಮೋ ಮುಕ್ತಿ ನಾರಾಯಣ ॥

ಮೂಲವರ್ : ಶ್ರೀ ಮೂರ್ತಿ, ಮುಕ್ತಿನಾರಾಯಣ

ತಾಯಾರ್ : ಶ್ರೀದೇವಿ, ಭೂದೇವಿ

ತೀರ್ಥಂ : ಗಂಡಕಿ ತೀರ್ಥಂ

ವಿಮಾನಂ : ಕನಕ ವಿಮಾನಂ

ಪ್ರತ್ಯಕ್ಷಗೊಂಡಿರುವುದು: ಬ್ರಹ್ಮ, ರುದ್ರ, ಗಂಡಕಿ

ಮಂಗಳಶಾಸನ ಮಾಡಿರುವವರು :

1. ಪೆರಿಯಾಳ್ವಾರ್ 2. ತಿರುಮಂಗೈಆಳ್ವಾರ್

## 71. ತಿರುವಡಮಧುರೈ (ಮಥುರಾ)

**॥ ಓಂ ಶ್ರೀಸತ್ಯಭಾಮ ಸಮೇತ ಶ್ರೀಗೋವರ್ಧನ ಸ್ವಾಮಿನೇ ನಮಃ ॥**

ಈ ದಿವ್ಯದೇಶವು ಆಗ್ರಾ ಮತ್ತು ದೆಹಲಿಗಳ ನಡುವೆ ಇದೆ. ರೈಲ್ವೆ ಸ್ಟೇಷನ್ ಇದೆ. ಅನೇಕ ಕಡೆಗಳಿಂದ ಬಸ್ಸು ಅನುಕೂಲವೂ ಇದೆ. ದೊಡ್ಡ ಪಟ್ಟಣವಾಗಿದ್ದು ಎಲ್ಲಾ ಅನುಕೂಲಗಳು ಇವೆ.

ಮಥುರಾ:– "ಅಯೋಧ್ಯಾ, ಮಥುರಾ, ಮಾಯಾ, ಕಾಶೀ, ಕಾಂಚಿ, ಅವಂತಿಕಾ, ದ್ವಾರಕಾ ಚೈವ ಸಪ್ತೈತೇ ಮೋಕ್ಷದಾಯಿಕಾ" ಎಂಬಂತೆ ಭಾರತ ದೇಶದ 'ಸಪ್ತ ಮೋಕ್ಷ ಕ್ಷೇತ್ರ'ಗಳಲ್ಲಿ ಮಥುರಾ ಎರಡನೆಯದು. ಶ್ರೀವಿಷ್ಣುಪುರಾಣ, ಶ್ರೀಮದ್ಭಾಗವತ, ಪದ್ಮಪುರಾಣ, ನಾರದೀಯ ಹಾಗೂ ಇದರ ಸಮೀಪದಲ್ಲೇ ಇರುವ 'ವೃಂದಾವನ' ವು ಸ್ಪರ್ಶ ಮಾತ್ರದಿಂದಲೇ ಮುಕ್ತಿಯನ್ನು ಕೊಡುತ್ತದೆಯೆಂದು ಪದ್ಮಪುರಾಣದಲ್ಲಿ ಹೇಳಲಾಗಿದೆ. "ಮಥುರಾ ನಾಮನಗರೀ ಪುಣ್ಯಾ ಪಾಪಹರೀ ಶುಭಾ" ಎಂಬ ಶ್ಲೋಕದಂತೆ ಪಾಪಗಳನ್ನು ಪರಿಹರಿಸಿ, ಪುಣ್ಯವನ್ನು ಕೊಡುವುದಾಗಿಯೂ, ಸಕಲ ಮಂಗಳಗಳಿಗೂ ವಾಸಸ್ಥಾನವಾಗಿಯೂ ಇರುವ ಮಥುರಾ ನಗರಿಯನ್ನೇ ತನ್ನ ಜನ್ಮ ಸ್ಥಳಕ್ಕಾಗಿ ಶ್ರೀಕೃಷ್ಣನು ಆರಿಸಿಕೊಂಡನು.

ಶ್ರೀಕೃಷ್ಣನ ಜನ್ಮಸ್ಥಾನ :- ಇದು ಯಮುನಾ ನದಿಯ ದಡದಲ್ಲಿದೆ. ಇಲ್ಲಿ ಅನೇಕ ಶ್ರೀಕೃಷ್ಣನ ಮಂದಿರಗಳಿದ್ದು ಅಯೋಧ್ಯೆಯಂತೆಯೇ ಯಾವುದೂ ಪುರಾತನ ಕಾಲದ್ದಲ್ಲ. ಶ್ರೀಕೃಷ್ಣನ ಜನ್ಮ ಸ್ಥಾನವಾದ ಕಾರಾಗೃಹವನ್ನು ತೋರಿಸುತ್ತಾರೆ. ಇದರ ಪಕ್ಕದಲ್ಲಿ ಶ್ರೀಕೃಷ್ಣನ ಮಂದಿರವಿದ್ದು, ಈ ದೇವಸ್ಥಾನದ ಮೇಲ್ಛಾವಣಿಯಲ್ಲಿ ಶ್ರೀಕೃಷ್ಣನ ನಾನಾ ಬಾಲಲೀಲೆಗಳನ್ನು ವರ್ಣಗಳಲ್ಲಿ ಚಿತ್ರಿಸಿದ್ದಾರೆ. ಆದರೆ ಇಲ್ಲಿರುವ ಯಾವ ದೇವಸ್ಥಾನದ ಅರ್ಚಾಮೂರ್ತಿಯನ್ನೂ ಆಳ್ವಾರ್‌ಗಳು ಹಾಡಿಲ್ಲ: ಆದರೆ ಮಥುರಾ ಕ್ಷೇತ್ರದ ಬಗ್ಗೆ ಹಾಡಿದ್ದಾರೆ.

ದ್ವಾರಕಾಧೀಶ ಮಂದಿರ:- ಈ ದೇವಾಲಯವು ಸುಮಾರು 160 ವರ್ಷಗಳ ಹಿಂದೆ ವಲ್ಲಭಾಚಾರ್ಯ ಸಂಪ್ರದಾಯದವರಿಂದ ಕಟ್ಟಲ್ಪಟ್ಟಿತು. ಶ್ರೀಕೃಷ್ಣಪರಮಾತ್ಮ ರುಕ್ಮಿಣೀ ಸತ್ಯಭಾಮಾ ಸಮೇತನಾಗಿರುವ ಈ ಸನ್ನಿಧಿಯಲ್ಲಿ ಶ್ರೀಕೃಷ್ಣನಿಗೆ ಶ್ರಾವಣ ಮಾಸದಲ್ಲಿ ದೊಡ್ಡ ಉತ್ಸವ ನಡೆಯುತ್ತದೆ. ಈ ದೇವಾಲಯದ ಪ್ರಾಂಗಣದ ಸುತ್ತಲೂ ಬಹಳ ಅಪರೂಪವಾದ, ಅತ್ಯಂತ ಸುಂದರವಾದ ಶ್ರೀಕೃಷ್ಣನ ಲೀಲೆಗಳು(ಪ್ರಮುಖವಾಗಿ ರಾಧಾ-ಕೃಷ್ಣರ ಲೀಲೆಗಳು, ರಾಧೆಯ ಅಷ್ಟಸಖಿಯರು) ಇನ್ನೂ ಮುಂತಾದ ವರ್ಣಚಿತ್ರಗಳಿವೆ.

ವಿಶ್ರಾಮ್ ಘಾಟ್ :- ಮಥುರೆಯ ಯಮುನಾ ನದಿಯ ದಡದಲ್ಲಿ 24 ಸ್ನಾನಘಟ್ಟಗಳಲ್ಲಿ ಇದು ಪ್ರಮುಖವಾದುದು. ಭಗವಾನ್ ಶ್ರೀಕೃಷ್ಣನು ತನ್ನ ಸೋದರಮಾವ ಕಂಸನನ್ನು ಕೊಂದು ಅವನ ಅಂತಿಮ ಕ್ರಿಯೆಗಳನ್ನು 'ವಿಶ್ರಾಮ ಘಾಟ್' ನಲ್ಲಿ ನಡೆಸಿ, ಇಲ್ಲಿಯೇ ಸ್ನಾನಮಾಡಿ ವಿಶ್ರಮಿಸಿಕೊಂಡನು. ಈ ಸ್ಥಳದಲ್ಲಿ ಅತ್ಯಂತ ಸುಂದರವಾದ ತಿಳಿಯಾದ ಜಲವು ಕಂಗೊಳಿಸುತ್ತಿದ್ದು, ಇಲ್ಲಿಂದ ದೂರದಲ್ಲಿದ್ದ ವೃಂದಾವನದ ಎತ್ತರವಾದ ದೇವಾಲಯಗಳು, ಹಾಗೂ ಪವಿತ್ರ ಯಮುನಾ ನದಿಯಲ್ಲಿ ಸಂಚರಿಸುವ ದೋಣಿಗಳ ದೃಶ್ಯ ಮನಸ್ಸಿಗೆ ಮುದ ಕೊಡುತ್ತದೆ. ಹಾಗೂ ಇಲ್ಲಿ ಸ್ನಾನ ಮಾಡಿದರೆ ಜನನ-ಮರಣ ರೂಪವಾದ ಸಂಸಾರ ತಾಪದಿಂದುಂಟಾದ ಕ್ಲೇಶವನ್ನು ಪರಿಹರಿಸುತ್ತದೆಯೆಂದೂ, ಈ ತೀರ್ಥದ ಮಹಿಮೆಯನ್ನು ಕೊಂಡಾಡುತ್ತಾರೆ. ಸಮೀಪದಲ್ಲಿಯೇ ಆದಿ ಸ್ವಾಮಿಯ ಸನ್ನಿಧಿಯೂ ಇದೆ.

ಶ್ರೀ ವೃಂದಾವನ ಕ್ಷೇತ್ರ:- ಶ್ರೀಮದ್ಭಾಗವತದ ಪ್ರಾರಂಭದಲ್ಲಿಯೇ 'ಕಲಿ ಪ್ರಭಾವ' ದಿಂದ ತನ್ನ ಮಕ್ಕಳಾದ ಜ್ಞಾನ ಮತ್ತು ಭಕ್ತಿಗಳು ವೃದ್ಧಾವಸ್ಥೆಯಲ್ಲಿದ್ದು,

ಇನ್ನೇನು ಜೀವ ಬಿಡುವ ಸ್ಥಿತಿಯಲ್ಲಿದ್ದಾರೆ, ತಾವು ಮಾರ್ಗದರ್ಶನ ನೀಡಿ ಎಂದು ಭಕ್ತಿ ದೇವಿ ಕೇಳಿಕೊಂಡಾಗ, ಶ್ರೀ ನಾರದ ಮುನಿಗಳು ನೀನು ವೃಂದಾವನಕ್ಕೆ ಹೋಗು ಅಲ್ಲಿ ನಿನ್ನ ಮಕ್ಕಳಿಗೆ ಚೈತನ್ಯ ಬರುತ್ತದೆ ಎಂದು ಹೇಳಿದ ಪವಿತ್ರ ಕ್ಷೇತ್ರವೇ 'ಶ್ರೀ ವೃಂದಾವನ ಕ್ಷೇತ್ರ'.

ಇದು ಶ್ರೀಕೃಷ್ಣ ಭಕ್ತರ ಪವಿತ್ರಭೂಮಿ. 12ಕಿ.ಮೀ. ದೂರದಲ್ಲಿ ವೃಂದಾವನವಿದೆ. ಇಲ್ಲಿ ಯಮುನಾನದಿ ಹರಿಯುತ್ತದೆ. ಹಿಮಾಲಯದಿಂದ ಉದ್ಭವಿಸುವ ಪವಿತ್ರ ಯಮುನೆಯಲ್ಲಿಯೇ ಶ್ರೀಕೃಷ್ಣಪರಮಾತ್ಮನು ಹಲವಾರು ಲೀಲೆಗಳನ್ನು ಮಾಡಿದ್ದಾನೆ. ಯಮುನೆಯು ತನ್ನ ರೂಪಿನಿಂದಲೂ, ಪವಿತ್ರತೆಯಿಂದಲೂ ನಮ್ಮ ಮನಸ್ಸನ್ನೂ ಪಾಪಗಳನ್ನೂ ಅಪಹರಿಸುತ್ತಾಳೆ.

ವೃಂದಾವನದಲ್ಲಿ ಸುಮಾರು ಐದು ಸಾವಿರಕ್ಕೂ ಹೆಚ್ಚು ದೇವಾಲಯಗಳಿರುವುದಾಗಿ ಹೇಳುತ್ತಾರೆ. ಇಲ್ಲಿರುವ ಪ್ರಮುಖ ದೇವಾಲಯಗಳು- ಗೋವಿಂದಜೀ ದೇವಸ್ಥಾನ, ಶ್ರೀಗೋಪಿನಾಥ ದೇವಸ್ಥಾನ, ರಾಧಾ-ದಾಮೋದರ ದೇವಸ್ಥಾನ:- ಇದು 'ಬಾಂಕೇ ಬಿಹಾರಿ' ದೇವಸ್ಥಾನದ ಆವರಣದಲ್ಲಿಯೇ ಚೈತನ್ಯ ಮಹಾಪ್ರಭುಗಳ ಪ್ರಮುಖ ಶಿಷ್ಯರುಗಳ ಭಜನಾ ಕುಟೀರಗಳಿವೆ. 'ಬಾಂಕೇ ಬಿಹಾರಿ' ಮಂದಿರ ಹಾಗೂ ಇಸ್ಕಾನ್ ಶ್ರೀರಾಧಾ- ಕೃಷ್ಣನ ದೇವಸ್ಥಾನವಿದೆ.

ವೃಂದಾವನದಲ್ಲಿ ಮುಖ್ಯವಾಗಿ 12 ಕಾಡು(ವನ)ಗಳಿವೆ.

1. ಮಹಾವನ, 2. ಕಾಮ್ಯವನ, 3. ಮಧುವನ, 4. ತಾಳ ವನ, 5. ಕಮುದ ವನ, 6. ಭಾಂಡೀವನ, 7. ಬೃಂದಾವನ, 8. ಖದಿರ ವನ, 9. ಲೋಹವನ, 10. ಭದ್ರವನ, 11. ಬಹುಲಾವನ, 12. ಬಿಲ್ವವನ

ಶ್ರೀಕೃಷ್ಣ ಬಾಲ್ಯ ಲೀಲೆಗಳು ನಡೆದ ಅನೇಕ ಸ್ಥಳಗಳಲ್ಲಿ ಪ್ರಮುಖವಾದವುವೆಂದರೆ ಕಾಳಿಂಗ ಮರ್ದನದ ಸ್ಥಳ- ಇಲ್ಲಿರುವ 5000ವರ್ಷಗಳಿಗೂ ಹಳೆಯದಾದ ಕದಂಬ ವೃಕ್ಷವನ್ನು ತೋರಿಸುತ್ತಾರೆ. ಈ ಕದಂಬ ವೃಕ್ಷದಿಂದಲೇ ಶ್ರೀಕೃಷ್ಣನು ನದಿಗೆ ಧುಮುಕಿದ್ದೆಂದೂ ಹೇಳುತ್ತಾರೆ.

ಇದರ ಪಕ್ಕದಲ್ಲಿ ಚಿರಾ ಘಾಟ್ :- ಶ್ರೀಕೃಷ್ಣನು 'ಕೇಶಿ' ಯೆಂಬ ರಾಕ್ಷಸನನ್ನು ಕೊಂದು ವಿಶ್ರಾಂತಿ ಪಡೆದಿದ್ದನಂತೆ. ಇಲ್ಲಿಯೇ ತುಂಬ ಕೃಷ್ಣನು ಸ್ನಾನ ಮಾಡುತ್ತಿದ್ದ

ಗೋಪಿಕಾ ಸ್ತ್ರೀಯರ ವಸ್ತ್ರಗಳನ್ನು ಅಪಹರಿಸಿದ್ದೆಂದೂ ಹೇಳುತ್ತಾರೆ (ಇಲ್ಲಿ ಬಹಳಷ್ಟು ತುಂಟ ಕೋತಿಗಳಿದ್ದು ಕನ್ನಡಕಗಳು, ಬಣ್ಣದ ವ್ಯಾನಿಟಿ ಬ್ಯಾಗ್, ಪಾದರಕ್ಷೆಗಳನ್ನು ಅಪಹರಿಸುತ್ತವೆ. ಆದ್ದರಿಂದ ಎಚ್ಚರದಿಂದಿರುವುದು ಒಳ್ಳೆಯದು.)

ಕೃಷ್ಣನು ರಾಧೆಯನ್ನು ಅಲಂಕರಿಸುತ್ತಿದ್ದ ಸ್ಥಳ ಹಾಗೂ ಗೋಪಿಯರೊಡನೆ ರಾಸಕ್ರೀಡೆಯಾಡಿದ 'ಸೇವಾಕುಂಜ' ವಿದೆ. ಇಲ್ಲಿ ಇಂದಿಗೂ ಮಧ್ಯರಾತ್ರಿ ಶ್ರೀಕೃಷ್ಣ ಹಾಗೂ ಗೋಪಿಕೆಯರು ರಾಸಕ್ರೀಡೆಯಾಡುವರೆಂದೂ ಇಲ್ಲಿ ರಾತ್ರಿ ವೇಳೆ ಪ್ರವೇಶ ನಿಷಿದ್ಧ. ಶ್ರೀಕೃಷ್ಣನು ರಾಸಕ್ರೀಡೆ ಯಾಡಿದ ಮತ್ತೊಂದು ಸ್ಥಳ ' ನಿಧುವನ' ಹತ್ತಿರದಲ್ಲಿಯೇ ಇದೆ. ಇದರ ಪಕ್ಕದಲ್ಲಿಯೇ 'ಇಮ್ಲಿತಲಾ'ವಿದೆ.

ಇಲ್ಲಿ ಹಲವಾರು ಆಶ್ರಮಗಳಿದ್ದು, ಆಗಿಂದಾಗ್ಗೆ ಶ್ರೀಮದ್ಭಾಗವತ ಸಪ್ತಾಹ ನಡೆಯತ್ತಲೇ ಇರುತ್ತದೆ. ಪ್ರತಿವರ್ಷವೂ ಕಾರ್ತಿಕ ಮಾಸದಲ್ಲಿ ಇಸ್ಕಾನ್ ಹಾಗೂ ಕೆಲವು ದೇವಾಲಯದವರು 'ವ್ರಜಮಂಡಲ ಪರಿಕ್ರಮ'ವನ್ನು ಏರ್ಪಡಿಸಿ, ಗುಂಪುಗುಂಪಾಗಿ ಕಾಲ್ನಡಿಗೆಯಲ್ಲಿ ಎಲ್ಲಾ ಪ್ರದೇಶಗಳನ್ನೂ ಸಂದರ್ಶಿಸಿ, ಭಗವಂತನ ಲೀಲೆಗಳನ್ನು ಕೊಂಡಾಡುತ್ತಾರೆ.

ಪ್ರತಿವರ್ಷವೂ ಇಲ್ಲಿ ಗೋಕುಲಾಷ್ಟಮಿ ಬಹಳ ವಿಶೇಷ. ಲಕ್ಷಾಂತರ ಶ್ರೀಕೃಷ್ಣಭಕ್ತರು ಇಲ್ಲಿ ಸೇರಿ 'ಗೋಕುಲಾಷ್ಟಮಿ'ಯನ್ನು ಸಂಭ್ರಮದಿಂದ ಆಚರಿಸುತ್ತಾರೆ.

ಗೋವರ್ಧನ ಗಿರಿ:- ಮಥುರಾದಿಂದ 10ಕಿ.ಮೀ ದೂರದಲ್ಲಿ ಗೋವರ್ಧನಗಿರಿಯಿದೆ. 'ಗಿರಿರಾಜ'ನೆಂದು ಪ್ರಸಿದ್ಧಿಯಾಗಿರುವ ಈ ಬೆಟ್ಟವನ್ನು ಭಗವಾನ್ ಶ್ರೀಕೃಷ್ಣಪರಮಾತ್ಮನು ತನ್ನ ಕಿರುಬೆರಳಿನಿಂದ ಎತ್ತಿದ್ದರಿಂದಲೂ, ಇಂದ್ರನಿಂದ ದೇವಲೋಕದ ಕಾಮೇಧೇನುವಿನಿಂದ 'ಗೋವಿಂದ ಪಟ್ಟಾಭಿಷೇಕ'ವಾಗಿದ್ದರಿಂದಲೂ ಈ ಸ್ಥಳ ಪ್ರಖ್ಯಾತಿ ಪಡೆದಿದೆ.

ಮಥುರಾದಿಂದ ಬಸ್ಸು ಮತ್ತಿತರ ವಾಹನ ಸೌಲಭ್ಯಗಳಿವೆ.

ಇಲ್ಲಿ ಭಕ್ತಾದಿಗಳು 'ಗಿರಿ ಪ್ರದಕ್ಷಿಣೆ'ಯನ್ನು (ಗೋವರ್ಧನ ಪರಿಕ್ರಮ)ವನ್ನೂ ಮಾಡುತ್ತಾರೆ. 'ಗಿರಿಪ್ರದಕ್ಷಿಣೆ' ಮಾಡುವಾಗ ಕೆಲವು ಜಾಗಗಳನ್ನು ನೋಡಬಹುದು. ಅವುಗಳಲ್ಲಿ ಮುಖ್ಯವಾದವು. ಅವುಗಳಲ್ಲಿ ಕೆಲವನ್ನು ಮಾತ್ರಾ ಇಲ್ಲಿ ನೀಡಲಾಗಿದೆ.

* ಕುಸುಂ ಸರೋವರ :- ಶ್ರೀ ಕೃಷ್ಣನು ಈ ಕೊಳದಿಂದಲೇ ಅರಳಿದ ಕೆಂದಾವರೆಗಳನ್ನು ಕಿತ್ತು ಗೋಪಿಕೆಯರಿಗೆ ಮುಡಿಸುತ್ತಿದ್ದನಂತೆ. ಕೋಟೆ ಕೊತ್ತಲುಗಳಿಂದ ಕೂಡಿದ ಈ ಸುಂದರ ಪುಷ್ಕರಿಣಿ ಸುಂದರವಾಗಿದೆ. ಈ ಜಾಗದಲ್ಲಿಯೇ ಉದ್ಧವನು 'ನಾನು ಈ ಪವಿತ್ರ ಭೂಮಿಯಲ್ಲಿ ಗಿಡಬಳ್ಳಿಗಳಾಗಿಯಾದರೂ ಜನ್ಮ ತಾಳಬಾರದೇ' ಎಂದು ಉದ್ಘರಿಸಿದ್ದು, ಇಲ್ಲಿ ಉದ್ಧವನ ಒಂದು ಸುಂದರ ವಿಗ್ರಹವಿದೆ.

* ನಾರದವನಂ:- ಈ ಸ್ಥಳದಲ್ಲಿಯೇ ಶ್ರೀನಾರದ ಮುನಿಗಳು ಶ್ರೀಕೃಷ್ಣನನ್ನು ಆಗಾಗ್ಗೆ ಸಂಧಿಸುತ್ತಿದ್ದರು.

* ಮಾನಸಿ ಗಂಗಾ:- ಶ್ರೀಕೃಷ್ಣನಿಂದ ಯಮುನೆಯು ಪ್ರಖ್ಯಾತಳಾದಳು. ಇದನ್ನು ನೋಡಿ ಗಂಗೆಯೂ ತನ್ನಲ್ಲೂ ಶ್ರೀಕೃಷ್ಣನು 'ನೀರಾಟ'ವಾಡಲೆಂದು ಉದ್ಭವಿಸಿದ್ದಾಳೆ.

* ರಾಧಾ ಕುಂಡ-ಶ್ಯಾಮಕುಂಡ :- ಶ್ರೀಕೃಷ್ಣನು 'ಅರಿಷ್ಟಾಸುರ' ನನ್ನು ಕೊಂದ ಮೇಲೆ ಅದರಿಂದ ದೋಷವುಂಟಾಯಿತೆಂದು ಗೋಪಿಕೆಯರು ಹೇಳಲು, ಭಗವಂತನು ತನ್ನ ಸಂಕಲ್ಪದಿಂದಲೇ ಎಲ್ಲಾ ಪವಿತ್ರ ತೀರ್ಥಗಳನ್ನೂ ಇಲ್ಲಿಗೇ ಬರಹೇಳಿದನು ಅದೇ 'ಶ್ಯಾಮಕುಂಡ' ವಾಯಿತು. ಇದನ್ನು ನೋಡಿ ರಾಧೆಯೂ ತನ್ನ ಕೈನ ಬಳೆಯಿಂದಲೇ 'ರಾಧಕುಂಡ'ವನ್ನು ಸೃಷ್ಟಿಸಿದಳು.

**ಮೂಲವರ್ : ಗೋವರ್ಧನ, ಬಾಲಕೃಷ್ಣ**

**ತಾಯಾರ್ : ಸತ್ಯಭಾಮ**

**ತೀರ್ಥಂ : ಇಂದ್ರ ತೀರ್ಥಂ, ಗೋವರ್ಧನ ತೀರ್ಥಂ, ಯಮುನಾ ನದಿ**

**ವಿಮಾನಂ : ಗೋವರ್ಧನ**

**ಪ್ರತ್ಯಕ್ಷಗೊಂಡಿರುವುದು : ಇಂದ್ರಾದಿ ದೇವರುಗಳು, ಬ್ರಹ್ಮ, ವಸುದೇವ, ದೇವಕಿ**

**ಮಂಗಳಶಾಸನ ಮಾಡಿರುವವರು :**

**1. ಪೆರಿಯಾಳ್ವಾರ್, 2. ಆಂಡಾಳ್, 3. ತೊಂಡರಡಿಪುಡಿ ಆಳ್ವಾರ್, 4. ತಿರುಮಂಗೈಆಳ್ವಾರ್, 5. ನಮ್ಮಾಳ್ವಾರ್**

# 72. ತಿರುವಾಯ್‌ಪಾಡಿ (ಗೋಕುಲ)

॥ ಓಂ ಶ್ರೀರುಕ್ಮಿಣಿಸತ್ಯಭಾಮ ಸಮೇತ ಶ್ರೀನವಮೋಹನಕೃಷ್ಣ ಸ್ವಾಮಿನೇ ನಮಃ ॥

ಮಥುರಾದಿಂದ 8 ಕಿ.ಮೀ. ದೂರದಲ್ಲಿದೆ. ಬಹಳ ಚಿಕ್ಕ ಊರಾಗಿದ್ದು, ಹೆಚ್ಚಿನ ಅನುಕೂಲಗಳಿಲ್ಲ. ಮಥುರೆಯಿಂದ ಗಾಡಿ ರಿಕ್ಷಾ ಅಥವಾ ಟ್ಯಾಕ್ಸಿಯಲ್ಲಿ ಹೋಗಿ ಬರಬಹುದು. ಇಲ್ಲಿ ಸಮೀಪದಲ್ಲಿಯೇ ಪೂತನಾ ಮೋಕ್ಷ ಸ್ಥಳ ಹಾಗೂ ಶಕಟ ಭಂಜನ ಸ್ಥಳ ಹಾಗೂ ಶ್ರೀಕೃಷ್ಣ ಬಲರಾಮರಿಗೆ ಗರ್ಗಾಚಾರ್ಯರು ನಾಮಕರಣ ಮಾಡಿದ ಸ್ಥಳಗಳನ್ನೂ ತೋರಿಸುತ್ತಾರೆ.

ಈ ದೇವಾಲಯವು ಬಹು ಕಂಬಗಳಿಂದ ಕೂಡಿದೆ. ಇಲ್ಲಿರುವ ಬೃಹದಾಕಾರದ ಅಂಗಳದಲ್ಲಿಯೇ ಶ್ರೀ ಕೃಷ್ಣ-ಬಲರಾಮರು ಅಂಬೆಗಾಲಿಟ್ಟುಕೊಂಡು ಓಡಾಡಿ ಯಶೋದೆಗೆ ಮುದ ಕೊಡುತ್ತಿದ್ದರಂತೆ. ಇಲ್ಲಿ ಭಕ್ತರೂ ತಾವೂ ಸಹ ಅಂಬೆಗಾಲಿಟ್ಟುಕೊಂಡು ಶ್ರೀಕೃಷ್ಣನ ಸ್ಮರಣೆ ಮಾಡಿಕೊಳ್ಳುತ್ತಾರೆ.

ಶ್ರೀ ಕೃಷ್ಣನು ಕಂಸನ ಸೆರೆಮನೆಯಲ್ಲಿ ದೇವಕಿ-ವಸುದೇವರ 8ನೇ ಪುತ್ರನಾಗಿ ಜನಿಸುತ್ತಾನೆ. ಆಗ ವಸುದೇವನು ಕಂಸನ ಭಯದಿಂದ ಆ ಮಗುವನ್ನು ಗೋಕುಲಕ್ಕೆ ಯಮುನಾ ನದಿ ಮೂಲಕ ತಲುಪಿಸಿ ಅಲ್ಲಿದ್ದ ಹೆಣ್ಣುಮಗುವನ್ನು ತರುತ್ತಾನೆ. ಅದೇ ಸ್ಥಳವೇ ಗೋಕುಲ.

ಕಂಸನು ಶ್ರೀಕೃಷ್ಣನನ್ನು ಕೊಲ್ಲಲು ಹಲವಾರು ರಾಕ್ಷಸರನ್ನು ಕಳಿಸಿದರೂ ಎಲ್ಲರೂ ಭಗವಂತನಿಂದ ಹತರಾದರು. ಇದರಿಂದ ನಂದಗೋಪನು ಈ ನಂದಗ್ರಾಮದಲ್ಲಿ ಒಂದು ಗುಡ್ಡದ ಮೇಲೆ ಅರಮನೆ ಕಟ್ಟಿದ್ದರಂತೆ. ಇಲ್ಲಿ ಶ್ರೀಕೃಷ್ಣ-ಬಲರಾಮರ ಕಪ್ಪು ಅಮೃತ ಶಿಲೆಯ ವಿಗ್ರಹಗಳಿವೆ. ಇದರ ಎಡಬಲ ಬದಿಗಳಲ್ಲಿ ಯಶೋದೆ ಮತ್ತು ನಂದ ಮಹಾರಾಜನ ವಿಗ್ರಹಗಳಿವೆ.

ಮೂಲವರ್ : ಮನಮೋಹನ ಕೃಷ್ಣ, ಅಂಬೆಗಾಲು ಕೃಷ್ಣ

ತಾಯಾರ್ : ರುಕ್ಮಿಣಿ, ಸತ್ಯಭಾಮ

ತೀರ್ಥಂ : ಯಮುನಾ ನದಿ

ವಿಮಾನಂ : ಹೇಮಕೂಟ ವಿಮಾನಂ

ಪ್ರತ್ಯಕ್ಷಗೊಂಡಿರುವುದು : ನಂದಗೋಪ

ಮಂಗಳಶಾಸನ ಮಾಡಿರುವವರು :

1. ಪೆರಿಯಾಳ್ವಾರ್, 2.ಆಂಡಾಳ್, 3.ತಿರುಮಂಗೈಆಳ್ವಾರ್

# 73. ತಿರುದ್ವಾರಕೈ

॥ ಓಂ ಶ್ರೀರುಕ್ಮಿಣಿ ಸಮೇತ ಶ್ರೀದ್ವಾರಕಾನಾಥ ಸ್ವಾಮಿನೇ ನಮಃ ॥

ಈ ದಿವ್ಯದೇಶವು ಗುಜರಾತ್ ರಾಜ್ಯದಲ್ಲಿ ಜಾಮ್‌ನಗರ್ ಮತ್ತು ಓಕಾ ನಗರಗಳ ನಡುವೆ ಇರುವ ಊರು. ರೈಲ್ವೆ ಸ್ಟೇಷನ್ ಇದೆ. ಎಲ್ಲಾ ಅನುಕೂಲಗಳು ಇವೆ. ದೇವಸ್ಥಾನವು ರೈಲ್ವೆ ಸ್ಟೇಷನ್‌ನಿಂದ 2ಕಿ.ಮೀ. ದೂರದಲ್ಲಿದೆ. ಶ್ರೀಕೃಷ್ಣನ ಸನ್ನಿಧಿಯು ಸಮುದ್ರಕ್ಕೆ ಸಮೀಪದಲ್ಲಿದೆ. ಗೋಮುಖಿ ನದಿಯು ಸಮುದ್ರವನ್ನು ಇಲ್ಲಿ ಸೇರುತ್ತದೆ.

ಶ್ರೀಕೃಷ್ಣನ ಕಾಲದ ದ್ವಾರಕೆ ಸಮುದ್ರದಲ್ಲಿ ಮುಳುಗಿ ಹೋಗಿದ್ದು. ಈಗಿರುವ ದೇವಸ್ಥಾನ ಇತ್ತೀಚಿನದು. ದೇವಸ್ಥಾನದ ಮೇಲೆ ತುದಿಯಲ್ಲಿ ಕಟ್ಟಿರುವ ಧ್ವಜವು ಬಹಳ ಉದ್ದವಾಗಿದ್ದು ಆಕರ್ಷಕವಾಗಿದೆ.

ಗೋಮತಿ ನದಿಯ ತೀರದಲ್ಲಿ ಶ್ರೀಕೃಷ್ಣನ ಸನ್ನಿಧಿಯೂ ಸಹ ಇದೆ.

ಜರಾಸಂಧನು ಜನರಿಗೆ ತೊಂದರೆ ಕೊಡದಂತಿರಲು ಸಮುದ್ರರಾಜನಿಂದ ಸ್ಥಳವನ್ನು ಕೇಳಿ ದೇವಶಿಲ್ಪಿ ವಿಶ್ವಕರ್ಮನಿಂದ ಈ ನಗರವನ್ನು ನಿರ್ಮಿಸಿದನು. ಈ ಸ್ಥಳವು ಮೋಕ್ಷಕ್ಕೆ ಹೋಗುವ ದ್ವಾರವಾಗಿರುವುದರಿಂದ ಇದನ್ನು ದ್ವಾರಕೆ ಎನ್ನುವರು.

ಪಂಚಪಾಂಡವರು ಈ ದ್ವಾರಕೆಯ ಸಮುದ್ರ ತೀರದಲ್ಲಿ 5 ಕುಂಡಗಳನ್ನು ನಿರ್ಮಿಸಿ ಸ್ನಾನ ಮಾಡಿ ಪೂಜೆ ಮಾಡಿದರು. ಇಂದಿಗೂ ಆ 5 ಕುಂಡಗಳನ್ನು ಕಾಣಬಹುದು.

ದೇಗುಲದಲ್ಲಿ ದೇವರಿಗೆ ಪ್ರತಿದಿನ ಮಗುವಾಗಿಯೂ, ರಾಜನಾಗಿಯೂ ಅಲಂಕಾರ ಮಾಡುವರು. ಗರ್ಭಗುಡಿಯ ಮೇಲಿರುವ ಬಾವುಟವನ್ನು ಪ್ರತಿದಿನ 5 ಬಾರಿ ಹಲವಾರು ಬಣ್ಣಗಳಲ್ಲಿ ಬದಲಾಯಿಸುತ್ತಾರೆ.

**ಮೂಲವರ್ : ಕಲ್ಯಾಣ ನಾರಾಯಣ, ದ್ವಾರಕಾಧೀಶ, ದ್ವಾರಕಾನಾಥ**
**ತಾಯಾರ್ : ಲಕ್ಷ್ಮಿ, ರುಕ್ಮಿಣಿ**
**ತೀರ್ಥಂ : ಗೋಮತಿ ನದಿ, ಸಮುದ್ರ ಸಂಗಮ**
**ವಿಮಾನಂ : ಹೇಮಕೂಟ ವಿಮಾನಂ**
**ಪ್ರತ್ಯಕ್ಷಗೊಂಡಿರುವುದು : ದ್ರೌಪತಿ**

ಮಂಗಳಶಾಸನ ಮಾಡಿರುವವರು :

1. ಪೆರಿಯಾಳ್ವಾರ್, 2. ಆಂಡಾಳ್, 3. ತಿರುಮಂಗೈಆಳ್ವಾರ್, 4. ತಿರುಮಳಿಶಿ ಆಳ್ವಾರ್, 5. ನಮ್ಮಾಳ್ವಾರ್

## 74. ತಿರುಸಿಂಗವೇಲ್ ಕುಣ್ರಂ (ಅಹೋಬಿಲಂ)

॥ ಓಂ ಶ್ರೀಲಕ್ಷ್ಮೀ ಸಮೇತ ಶ್ರೀಯೋಗನರಸಿಂಹ ಸ್ವಾಮಿನೇ ನಮಃ ॥

ಇದು ಪ್ರಸಿದ್ಧವಾದ ನರಸಿಂಹಕ್ಷೇತ್ರ. ಒಂಬತ್ತು ನರಸಿಂಹ ಸನ್ನಿಧಿಗಳಿದ್ದು, ನವ ನಾರಸಿಂಹ ಕ್ಷೇತ್ರಗಳೆಂದು ಖ್ಯಾತಿ ಪಡೆದಿದೆ. ಆಂಧ್ರ ಪ್ರದೇಶದಲ್ಲಿರುವ ಕಡಪ ಅಥವಾ ನಂದ್ಯಾಲ್ ಊರುಗಳಿಂದ ಬಸ್ ಸೌಕರ್ಯ ಇದೆ. ಈಗ ಅಹೋಬಿಲ ಊರಿನವರೆಗೂ ಬಸ್‌ಗಳು ಸಂಚರಿಸುತ್ತವೆ. ಕರ್ನೂಲ್‌ನಿಂದ ಸಹ ಹೋಗಬಹುದು.

ಹಿರಣ್ಯಕಶಿಪುವಿನ ಸಂಹಾರ ಮಾಡಲು ನಾರಾಯಣನು ಅವತಾರ ಎತ್ತಿದ ಸ್ಥಳ. ಇಲ್ಲಿ ನಾರಾಯಣನು ಸಿಂಹ+ನರ ರೂಪಿಯಾಗಿ ನರಸಿಂಹ ಅವತಾರ ಎತ್ತಿರುವುದರಿಂದ ಈ ಸ್ಥಳಕ್ಕೆ ತಿರುಸಿಂಗವೇಲ್ ಕುಣ್ರಂ ಎಂದು ಕರೆಯುತ್ತಾರೆ.

ನವನರಸಿಂಹ ಸನ್ನಿಧಿಗಳು ಈ ಕೆಳಕಂಡಂತೆ ಇವೆ.

1. ಅಹೋಬಿಲ ನರಸಿಂಹ – ಬೆಟ್ಟದ ಕೆಳಗೆ ಎಲ್ಲಾ ಉತ್ಸವಗಳೂ, ಪೂಜೆಗಳೂ ಬಹಳ ವಿಜೃಂಭಣೆಯಿಂದ ಇಲ್ಲಿ ನಡೆಯುತ್ತವೆ. ಇದು ಪ್ರಧಾನವಾದ ಸ ನಿ ದಿ .

2. ಯೋಗಾ ನರಸಿಂಹ, 3. ಮಾಲೋಲ ನರಸಿಂಹ, 4. ಜ್ವಾಲ ನರಸಿಂಹ, 5. ಭಾರ್ಗವ ನರಸಿಂಹ, 6. ಚಕ್ರವಡ ನರಸಿಂಹ, 7. ಕಾರಂಜಿ ನರಸಿಂಹ, 8. ಭಾವ ನರಸಿಂಹ, 9. ವರಾಹ ನರಸಿಂಹ

ಈ ಕೆಳಗಿನ ಶ್ಲೋಕವು ನರಸಿಂಹನ ನವ ರೂಪಗಳನ್ನು ವರ್ಣಿಸುತ್ತದೆ. "ಜ್ವಾಲಾ ಅಹೋಬಿಲ ಮಾಲೋಲ ಕ್ರೋಧ ಕಾರಂಭ ಭಾರ್ಗವಾಹ ಯೋಗಾನಂದ. ಛತ್ರವರಾಹ ಪಾವನೋ ನವಮೂರ್ತ್ಯಹ"

ಒಂಭತ್ತೂ ನರಸಿಂಹಸ್ವಾಮಿಯ ದರ್ಶನ ಮಾಡಿ ಕೆಳಗಿನ ಅಹೋಬಿಲದಲ್ಲಿ ಶಾಂತ ಲಕ್ಷ್ಮೀ ನರಸಿಂಹ ಸ್ವಾಮಿ ದರ್ಶನ ಮಾಡುವುದು ಉತ್ತಮ.

ಶ್ರೀ ಲಕ್ಷ್ಮೀನರಸಿಂಹ ಅರ್ಚಾ ವಿಗ್ರಹವು ಭಗವಂತನಿಂದಲೇ ಅಹೋಬಿಲ

ಮಠದ ಆದಿಪುರುಷರಾದ ಶ್ರೀವಣ್ ಆದಿ ಶಠಗೋಪ ಮುನಿಗಳಿಗೆ ದೊರೆತಿದ್ದು, ಅಂದಿನಿಂದ ಇಂದಿನವರೆಗೆ, ಶ್ರೀ ಮಠದ ಅನೇಕ ಆಚಾರ್ಯರುಗಳು ಶ್ರೀವೈಷ್ಣವ ದಿವ್ಯ ದೇಶಗಳಲ್ಲಿ ಕೆಲವನ್ನು ಜೀರ್ಣೋದ್ಧಾರ ಮಾಡಿದ್ದಾರಲ್ಲದೆ, ಅನೇಕ ಹೊಸ ದೇವಸ್ಥಾನಗಳ ಸ್ಥಾಪನೆಗೂ ಕಾರಣರಾಗಿದ್ದಾರೆ. ಶ್ರೀ ಅಹೋಬಿಲ ಕ್ಷೇತ್ರವನ್ನು ಒಂದು ಬಾರಿಯಾದರೂ ಸಂದರ್ಶಿಸುವುದು ಅತ್ಯಗತ್ಯ ಹಾಗೂ ಬಹಳ ಪುಣ್ಯಕಾರಿಯಾದದ್ದು. ಶ್ರೀಅಹೋಬಿಲ, ಶ್ರೀಶೈಲ ಮತ್ತು ತಿರುಮಲ ಪರ್ವತ ಶ್ರೇಣಿಗಳು ಒಂದೇ ಸಾಲಿನಲ್ಲಿ ಇರುವ ಬೆಟ್ಟಗಳು.

ಮೂಲವರ್ : ಶ್ರೀ ಪ್ರಹ್ಲಾದವರದನ್, ನರಸಿಂಹ, ಲಕ್ಷ್ಮೀ ನರಸಿಂಹ
ತಾಯಾರ್ : ಲಕ್ಷ್ಮಿ, ಚೆಂಚುಲಕ್ಷ್ಮಿ
ತೀರ್ಥಂ : ಪವನಾಶಿನಿ, ನರಸಿಂಹ ತೀರ್ಥಂ, ಭಾಗವ ತೀರ್ಥಂ
ವಿಮಾನಂ : ಗುಹ ವಿಮಾನ
ಪ್ರತ್ಯಕ್ಷಗೊಂಡಿರುವುದು: ಪ್ರಹ್ಲಾದ, ಗರುಡ
ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್

## 75. ತಿರುವೇಂಕಟಂ (ತಿರುಮಲ)

**॥ ಓಂ ಶ್ರೀಅಲಮೇಲುಮಂಗ ಸಮೇತ ಶ್ರೀವೆಂಕಟೇಶ ಸ್ವಾಮಿನೇ ನಮಃ ॥**

ತಿರುಪತಿ ಕ್ಷೇತ್ರವು ಭಾರತದಲ್ಲೇ ಅತ್ಯಂತ ಪ್ರಾಮುಖ್ಯತೆಯನ್ನು ಪಡೆದಿದ್ದು, ಭಾರತದ ಎಲ್ಲಾ ಕಡೆಗಳಿಂದಲೂ ಸಾರಿಗೆ ಸೌಲಭ್ಯವಿದ್ದು ವಿಮಾನ ಸೌಕರ್ಯವೂ ಸಹ ಇದೆ. ತಿರುಮಲೈ ತಿರುಪತಿ ದೇವಸ್ಥಾನದವರೇ ಛತ್ರಗಳನ್ನು, ಕಾಟೇಜುಗಳನ್ನು ಕಟ್ಟಿಸಿದ್ದು ವಸತಿ ಸೌಕರ್ಯ ಚೆನ್ನಾಗಿದೆ. ಏಳು ಬೆಟ್ಟಗಳ ನಡುವೆ ಇರುವ ಊರಾಗಿದ್ದು, ಪ್ರಕೃತಿ ಸೌಂದರ್ಯ ಬಹಳ ಚೆನ್ನಾಗಿದೆ. ಬೆಟ್ಟವನ್ನು ಕಾಲುನಡಿಗೆಯಿಂದಲೂ ಹತ್ತಬಹುದು. ವಾಹನಗಳೂ ಬೆಟ್ಟಕ್ಕೆ ಓಡಾಡುತ್ತವೆ. ಕಾಲುನಡಿಗೆಯಿಂದ ಹತ್ತುವುದು ಕೂಡ ಒಂದು ಅವರ್ಣನೀಯ ಅನುಭವ.

1. ವೆಂಕಟಾದ್ರಿ 2. ಶೇಷಾದ್ರಿ 3. ನೀಲಾದ್ರಿ 4. ಗರುಡಾದ್ರಿ 5. ವೃಷಭಾದ್ರಿ 6. ಅಂಜನಾದ್ರಿ 7. ನಾರಾಯಣಾದ್ರಿ ಎಂಬ 7 ಬೆಟ್ಟಗಳ ನಡುವೆ ತಿರುಮಲೈನಲ್ಲಿ ಶ್ರೀ ಶ್ರೀನಿವಾಸ ಇದ್ದಾರೆ

ಇದು ವರಾಹ ಕ್ಷೇತ್ರ. ಈ ಸ್ಥಳದಲ್ಲಿ ಶ್ರೀನಿವಾಸನು ನೆಲೆಸಲು ಜಾಗವನ್ನು ವರಾಹನಲ್ಲಿ ಕೇಳಿದಾಗ ವರಾಹನು 'ಭಕ್ತರು ನಿನ್ನ ದರ್ಶನಕ್ಕೆ ಬರುವ ಮೊದಲು ನನ್ನ ದರ್ಶನ ಮಾಡಬೇಕು' ಎಂದು ಕೇಳಿಕೊಳ್ಳುತ್ತಾನೆ. ಆಗ ಶ್ರೀನಿವಾಸನು ಅಸ್ತು ಎಂದು ತಿರುಮಲೆಯಲ್ಲಿ ಸ್ಥಾನ ಪಡೆಯುತ್ತಾನೆ. ಆದಕಾರಣ ತಿರುಮಲೆಯಲ್ಲಿ ಮೊದಲು ವರಾಹ ಮೂರ್ತಿಯ ದರ್ಶನ ಮಾಡಿದ ಬಳಿಕ ಶ್ರೀನಿವಾಸ ದರ್ಶನ ಮಾಡಬೇಕು.

ವೆಂಗಡಮ್ ಎಂದೇ ಹೆಸರುವಾಸಿಯಾಗಿದ್ದ ಈ ಸ್ಥಳ ಪುಣ್ಯ ಭೂಮಿ ಅಥವಾ ಪವಿತ್ರ ಸ್ಥಳ ಎನಿಸಿಕೊಂಡಿರಲಿಲ್ಲ. ಇದೊಂದು ಪಾಳೆಗಾರರ ಅಥವಾ ದಂಡನಾಯಕರ ಸ್ಥಳವಾಗಿದ್ದಿರಬಹುದು ಎಂಬುದು ಚಾರಿತ್ರಿಕ ವಿಚಾರ. ಅದೇನೇ ಇರಲಿ ತಿರುಪತಿಯ ಆರಂಭದ ಚರಿತ್ರೆ ಹಾಗೂ ವೈಚಾರಿಕ ವಿಸ್ತಾರತೆ ನಮಗೆ ದೊರಕುವುದು ಆಳ್ವಾರರ 4000 ಪ್ರಬಂಧಗಳಿಂದ (ತಮಿಳ ಪದ್ಯಗಳಿಂದ) ಎಂಬ ವಿಚಾರವನ್ನು ನೀಡುತ್ತದೆ. ಸುಮಾರು 12 ವಿಷ್ಣು ಭಕ್ತರ ವಿಷ್ಣುಪರ ಶ್ಲೋಕಗಳಲ್ಲಿ 108 ಸ್ಥಳಗಳ ವರ್ಣನೆಯಿದ್ದರೂ ತಿರುಪತಿ ಬಹಳ ಮೇರು ಸ್ಥಾನವನ್ನು ಪಡೆಯುತ್ತದೆ.

"ಶ್ರೀನಿವಾಸ" ಅದರಲ್ಲೂ ತಿರುಪತಿ ಶ್ರೀನಿವಾಸ ಸಾರ್ವಜನಿಕ ದೈವ. ಇವನು ಎಲ್ಲ ವರ್ಗಕ್ಕೂ, ಎಲ್ಲ ಧರ್ಮದವರಿಗೂ ಬೇಕಾಗಿರುವ ಇಷ್ಟ ದೈವ. ಅವನು ಎಲ್ಲಿ ಹೋದರೂ ಅಲ್ಲಿ ವೈಭವ ಮತ್ತು ಭಕ್ತಿಯ, ಭಕ್ತರ ಪ್ರವಾಹ. ಹರಿದಾಸರಿಗಂತೂ ಶ್ರೀನಿವಾಸ ಆರಾಧ್ಯ ದೈವ. ದಾಸರುಗಳೆಲ್ಲರೂ ಶ್ರೀನಿವಾಸನ ದರ್ಶನದಿಂದ ಪ್ರೇರಿತರಾಗಿ, ಸ್ಫೂರ್ತಿಗೊಂಡು ರಚಿಸಿರುವ ಕೀರ್ತನ ಕುಸುಮಗಳು ಅವೆಷ್ಟಿದೆಯೋ! ಇದು ತಿರುಪತಿ ಗಿರಿವಾಸನ ಮಹಿಮೆ, ಮಹತ್ವ

ತಿರುಮಲೈಯ ಸುತ್ತಮುತ್ತ ಅನೇಕ ತೀರ್ಥಗಳಿದ್ದು ಅವುಗಳಲ್ಲಿ ಮುಖ್ಯವಾದುವು ಪಾಪನಾಶಿನಿ, ಆಕಾಶಗಂಗೆ, ಕಪಿಲತೀರ್ಥ, ತಿರುಚಾನೂರಿನಲ್ಲಿ ಶ್ರೀ ಪದ್ಮಾವತಿ ಅಮ್ಮನವರ ದೊಡ್ಡದೇವಸ್ಥಾನವಿದ್ದು, ಇಲ್ಲಿಯೂ ಸಹ ತಿರುಮಲೈನಲ್ಲಿ ನಡೆಯುವಂತೆಯೇ, ಎಲ್ಲಾ ಪೂಜೆ, ಉತ್ಸವಗಳು ಬಹಳ ವಿಜೃಂಭಣೆಯಿಂದ ನಡೆಯುತ್ತದೆ. ತಿರುಮಲೈಯಲ್ಲಿ ನವರಾತ್ರಿಯ ಸಮಯದಲ್ಲಿ ನಡೆಯುವ "ಬ್ರಹ್ಮೋತ್ಸವ" ಬಹಳ ಪ್ರಸಿದ್ಧವಾದದ್ದು.

ತಿರುವೇಂಗಡ ಮುಡೈಯಾನ್ ಆದ ಶ್ರೀ ಶ್ರೀನಿವಾಸನನ್ನು ಹೆಚ್ಚುಕಮ್ಮಿ

ಎಲ್ಲಾ ಆಳ್ವಾರರುಗಳೂ ಹಾಗೂ ಆಚಾರ್ಯರು ಅತ್ಯಂತ ಭಕ್ತಿಭಾವದಿಂದ ಹಾಡಿದ್ದಾರೆ. ಶ್ರೀರಾಮಾನುಜರು ಇಲ್ಲಿಯೇ ಒಂದು ವರ್ಷ ಕಾಲ ಇದ್ದು, ಶ್ರೀಮದ್ ರಾಮಾಯಣವನ್ನು ಶ್ರೀ ಶೈಲಪೂರ್ಣರ ಹತ್ತಿರ ಕಾಲಕ್ಷೇಪ ಮಾಡಿದರು. ಶ್ರೀವೈಷ್ಣವರಿಗೆ ತಿರುಪತಿ ಕ್ಷೇತ್ರವು ಅತ್ಯಂತ ಪವಿತ್ರದ್ದಾಗಿದ್ದು ನಾಲ್ಕು ಮಹಾ ಕ್ಷೇತ್ರಗಳಲ್ಲಿ ಎರಡನೆಯದೆನಿಸಿಕೊಂಡಿದೆ.

ಕೆಳಗಿನ ತಿರುಪತಿಯಲ್ಲಿ (ಗೋವಿಂದರಾಜಪಟ್ಟಣ)ಶ್ರೀಗೋವಿಂದರಾಜ ಪೆರುಮಾಳ್ ಸನ್ನಿಧಿಯಿದ್ದು, ಅಲ್ಲಿಯೂ ಸಹ ತಿರುಮಲೈನಲ್ಲಿ ನಡೆಯುವಂತೆ ಪೂಜಾ ವಿಧಿಗಳೂ ಸಾಂಗೋಪಾಂಗವಾಗಿ ನಡೆಯುತ್ತವೆ. ತಿರುಚಾನೂರು, ತಿರುಪತಿಯಿಂದ 5ಕಿ.ಮೀ. ದೂರದಲ್ಲಿದ್ದು ಶ್ರೀಪದ್ಮಾವತಿ ಅಮ್ಮನವರ ದೇವಸ್ಥಾನವಿದ್ದು, ಎಲ್ಲಾ ಪೂಜೆಗಳೂ ಹಾಗೂ ಉತ್ಸವಗಳು ಬಹಳ ವಿಜೃಂಭಣೆಯಿಂದ ನಡೆಯುತ್ತದೆ.

ತಿರುಮಲೈ ಕ್ಷೇತ್ರವನ್ನು ಜೀವಿತ ಕಾಲದಲ್ಲಿ ಒಂದೆರಡು ಬಾರಿಯಾದರೂ ಸಂದರ್ಶಿಸುವುದು ಆಸ್ತಿಕರಿಗೆ ಜೀವನದ ಸಾರ್ಥಕ್ಯವೆನಿಸುತ್ತದೆ.

## ತಿರುಪತಿ ವೆಂಕಟೇಶ್ವರ ಸ್ವಾಮಿಯ ದರ್ಶನ ಮಾಡುವ ವಿಧಾನ

ತಿರುಪತಿಗೆ ಹೋದ ಮೇಲೆ ಮೊದಲು ಅಲ್ಲಿರುವ ಪದ್ಮಾವತಿ ದೇವಿ ದರ್ಶನ ಮತ್ತು ನಿಮಗೆ ಅನುಕೂಲವಿದ್ದರೆ ಅಲ್ಲಿರುವ ಅನೇಕ ದೇವಾಲಯಗಳನ್ನು ದರ್ಶನ ಮಾಡಬೇಕು. (ಪದ್ಮಾವತಿ ದೇವಿ ದರ್ಶನ ಮಾತ್ರ ತಪ್ಪಿಸಬಾರದು). ಅಲ್ಲಿಂದ ತಿರುಮಲ ಬೆಟ್ಟದ ತುದಿಯಲ್ಲಿರುವ ಶ್ರೀನಿವಾಸ ಪಾದುಕೆಗಳನ್ನು ದರ್ಶನ ಮಾಡಬೇಕು. ನಂತರ ತಿರುಮಲ ಬೆಟ್ಟಕ್ಕೆ ತೆರಳಿ ಅಲ್ಲಿ ಮುಡಿ ಕೊಟ್ಟು ಸ್ನಾನ ಮಾಡಿ ಅಲ್ಲಿಂದ ದೇವಸ್ಥಾನದ ಪಕ್ಕದಲ್ಲಿರುವ ಸ್ವಾಮಿ ಪುಷ್ಕರಣಿಯಲ್ಲಿ ಮತ್ತೊಮ್ಮೆ ಸ್ನಾನ ಮಾಡಬೇಕು. ನಂತರ ಅಲ್ಲಿಯೇ ಇರುವ ವರಾಹ ಸ್ವಾಮಿ ದೇವರ ದರ್ಶನ ಮಾಡಬೇಕು. ನಂತರ ತಿಮ್ಮಪ್ಪನ ದರ್ಶನಕ್ಕೆ ತೆರಳಬೇಕು. ತಿಮ್ಮಪ್ಪನ ದರ್ಶನಕ್ಕೆಂದು ಗರ್ಭಗುಡಿ ಒಳಗೆ ಹೋಗುವ ಮೊದಲು ನಿಮ್ಮ ಸಂಕಲ್ಪಗಳನ್ನು ಒಂದು ಚಿಕ್ಕ ಪೇಪರ್‌ನಲ್ಲಿ ಬರೆದಿಟ್ಟುಕೊಂಡು ಅದನ್ನು ನೆನಪಿಸಿಕೊಳ್ಳುತ್ತಿರಬೇಕು. ಯಾಕೆಂದರೆ ತಿಮ್ಮಪ್ಪನ ಮುಂದೆ ನಿಂತಾಗ ಏನು ಮಾಡಬೇಕು ಎಂಬುದೇ ಮರೆತು ಹೋಗುತ್ತದೆ. ಗರ್ಭಗುಡಿಯ ಒಳಗೆ ಹೋದ

ಕೂಡಲೇ ತಿಮ್ಮಪ್ಪನ ಎದುರಿಗೆ ನೀವು ಹೊರಟಾಗ ಮೊದಲು ತಿಮ್ಮಪ್ಪನ ಕಾಲು ನೋಡಬೇಕು. ನಂತರ ಎದೆ, ಮುಖ ಕಿರೀಟ ಹಾಗೂ ಕಣ್ಣುಗಳು ಹಾಗೂ ಮುಖದ ದರ್ಶನವನ್ನು ಮಾಡಿ ತಿಮ್ಮಪ್ಪನನ್ನು ಕಣ್ತುಂಬಿಕೊಳ್ಳಬೇಕು. ಇದ್ದ ಅಲ್ಪ ಸಮಯದಲ್ಲಿ ತಿಮ್ಮಪ್ಪನ ಮುಂದೆ ಬಂದ ಕೂಡಲೇ ಬಲಗಡೆ ಸರಿದು ನಿಂತು ಮನಃಪೂರ್ವಕವಾಗಿ ವೆಂಕಟೇಶ್ವರನನ್ನು ಕಣ್ತುಂಬಿಕೊಂಡು ಎಲ್ಲವನ್ನೂ ಕೇಳಿಕೊಳ್ಳಬೇಕು. ಹೊರಗೆ ಬಂದ ನಂತರ, ವಿಮಾನ ಗೋಪುರದಲ್ಲಿ ವಿಮಾನ ಶ್ರೀನಿವಾಸನ ದರ್ಶನ ಮಾಡಬೇಕು. ಅಲ್ಲಿಯೇ ಬಂಗಾರದ ಬಾವಿ ಮತ್ತು ಬಂಗಾರದ ಹಲ್ಲಿಗಳಿವೆ. ಅವುಗಳನ್ನು ಸ್ಪರ್ಶ ಮಾಡಬೇಕು. ಹಾಗೂ ಅಲ್ಲಿ ಕಲ್ಲಿನ ಮೇಲೆ ಸಂಕಲ್ಪ ಬರೆಯುವ ಹಾಗೆ ವ್ಯವಸ್ಥೆ ಇದೆ. ಆ ಕಲ್ಲಿನ ಮೇಲೆ ನಿಮ್ಮ ಸಂಕಲ್ಪ ಬರೆಯಬೇಕು. ನೆನಪಿನಲ್ಲಿರಬೇಕು ಎಲ್ಲವೂ ಸಮಾಧಾನವಾಗಿ ಆಗಬೇಕು. ಯಾವುದಕ್ಕೂ ಅವಸರ ಮಾಡುವ ಹಾಗೆ ಆಗಿಲ್ಲ. ಮತ್ತೆ ತಿಮ್ಮಪ್ಪನ ದರ್ಶನ ಭಾಗ್ಯ ಎಷ್ಟೋ ದಿವಸಗಳ ನಂತರವಾಗುತ್ತದೆ ಎಂದು ನೆನಪಿನಲ್ಲಿಟ್ಟುಕೊಳ್ಳಬೇಕು. ಮುಂದೆ ಇರುವ ಹುಂಡಿಯಲ್ಲಿ ನಿಮ್ಮ ಕೈಲಾದಷ್ಟು ಹಣ ಅಥವಾ ಇನ್ನೇನಾದರೂ ಹಾಕಬೇಕು.

ಮೂಲವರ್ : ಶ್ರೀನಿವಾಸ, ವೆಂಕಟಾಚಲಪತಿ, ಬಾಲಾಜಿ, ಮಡೆಯಪ್ಪ ಸ್ವಾಮಿ

ಉತ್ಸವರ್ : ಕಲ್ಯಾಣ ವೆಂಕಟೇಶ್ವರ

ತಾಯಾರ್ : ಅಲಮೇಲುಮಂಗ, ಪದ್ಮಾವತಿ

ತೀರ್ಥಂ : ಆಕಾಶಗಂಗೆ, ಪಾಪನಾಶನಂ,

ವಿಮಾನಂ : ಆನಂದನಿಲಯ ವಿಮಾನಂ

ಪ್ರತ್ಯಕ್ಷಗೊಂಡಿರುವುದು: ಋಷಿಮುನಿಗಳು, ಬ್ರಹ್ಮ, ರುದ್ರ, ಆರ್ಮುಗ, ತೊಂಡೈಮಾನ್

ಮಂಗಳಶಾಸನ ಮಾಡಿರುವವರು :

1. ಪೆರಿಯಾಳ್ವಾರ್, 2. ಆಂಡಾಳ್, 3. ಕುಲಶೇಖರಾಳ್ವಾರ್, 4. ತಿರುಮಳಿಶೈ ಆಳ್ವಾರ್, 5. ತಿರುಪ್ಪಾನ ಆಳ್ವಾರ್, 6. ತಿರುಮಂಗೈಆಳ್ವಾರ್, 7. ಪೊಯ್‌ಗೇಯ್ ಆಳ್ವಾರ್, 8. ಬೂತತ್ತಾಳ್ವಾರ್, 9. ಪೇಯ್ ಆಳ್ವಾರ್, 10. ನಮ್ಮಾಳ್ವಾರ್

ವಟನಾಟ್ಟು ತಿರುಪತಿಗಳು ಸಮಾಪ್ತಿ

# ಮಲಯನಾಡು ತಿರುಪತಿಗಳು
# ಕೇರಳ ದಿವ್ಯ ದೇಶಗಳು
## 76. ತಿರುನಾವೈ

॥ ಓಂ ಶ್ರೀಮಲರ್‌ಮಂಗೈ ಸಮೇತ ಶ್ರೀನಾರಾಯಣ ಸ್ವಾಮಿನೇ ನಮಃ ॥

ಷೋರನೂರು-ಶಿರೂರ್ ನಡುವೆ ತಿರುನ್ನವಾಯ್ ರೈಲ್ವೆ ನಿಲ್ದಾಣದಿಂದ ಒಂದು ಮೈಲಿ ದೂರದಲ್ಲಿ ಎಡಕುಳಂಗೆ ದಕ್ಷಿಣದಲ್ಲಿ ಭಾರತೀ ನದಿಯ ದಡದಲ್ಲಿ ಈ ಕ್ಷೇತ್ರವಿದೆ. ದೇವಸ್ಥಾನವು ಪ್ರಶಾಂತ ವಾತಾವರಣದಲ್ಲಿದೆ. ಸಣ್ಣ ಊರಾಗಿರುವುದರಿಂದ ಹೆಚ್ಚಿನ ಸೌಕರ್ಯಗಳಿಲ್ಲ. ಸಣ್ಣ ಛತ್ರಗಳಿವೆ. ತಂಗಲು ಅವಕಾಶ ಉಂಟು.

ತಿರುಚ್ಚಿ ಪಕ್ಕದಲ್ಲಿನ ಇರಂಜಕ್ಕಲಂ ರೈಲ್ವೆ ನಿಲ್ದಾಣದಿಂದ ತಿರುವಲಕ್ಕಂಜಿ (ಅಂಜಕ್ಕಲಂ-ತಿರುವಂಜಿಕ್ಕಳಂ) ಎನ್ನುವ ಕುಲ ಶೇಖರಾಳ್ವಾರರ ಜನ್ಮಸ್ಥಳಕ್ಕೆ ಇಲ್ಲಿಂದ ಮುಂದುವರೆದು ಹೋಗಬಹುದು.

ಗಜೇಂದ್ರನು ಹಾಗೂ ಮಹಾಲಕ್ಷ್ಮಿಯು ನಾರಾಯಣನ ಪೂಜೆ ಮಾಡಲೋಸುಗ ಹೂವನ್ನು ಕೊಯ್ಯುತ್ತಿರುತ್ತಾರೆ. ಮಹಾಲಕ್ಷ್ಮಿ ಬಹಳ ಹೂ ಕೊಯ್ಯುತ್ತಿದ್ದರಿಂದ ಗಜೇಂದ್ರನಿಗೆ ಹೂಗಳೇ ಸಿಕ್ಕದಂತಾಗುತ್ತದೆ. ಆಗ ಗಜೇಂದ್ರನು ನಾರಾಯಣನಲ್ಲಿ ಮಹಾಲಕ್ಷ್ಮಿಯ ಮೇಲೆ ದೂರನ್ನು ಹೇಳುತ್ತಾನೆ. ದೂರನ್ನು ಆಲಿಸಿದ ನಾರಾಯಣ ಮಹಾಲಕ್ಷ್ಮಿಗೆ ಗಜೇಂದ್ರನಿಗೆ ಹೂಗಳನ್ನು ಕೊಡಲು ಹೇಳುತ್ತಾನೆ. ನಂತರ ಗಜೇಂದ್ರನು ಹೂಗಳನ್ನು ಕೊಯ್ದು ಮಹಾಲಕ್ಷ್ಮಿ ಮತ್ತು ನಾರಾಯಣರಿಗೆ ಪೂಜೆ ಮಾಡುತ್ತಾನೆ. ಆದಕಾರಣ ಇಲ್ಲಿ ಮಹಾಲಕ್ಷ್ಮಿಗೆ ಪ್ರತ್ಯೇಕವಾದ ದೇವಾಲಯವಿದೆ. ಮಹಾಲಕ್ಷ್ಮಿಯ ದೇವಾಲಯವನ್ನು ಕೇರಳ ದಿವ್ಯ ದೇಶಗಳಲ್ಲಿ ಬೇರೆಲ್ಲೂ ಕಾಣಲಾಗುವುದಿಲ್ಲ.

ನವ ಯೋಗಿಗಳು ತಪಸ್ಸು ಮಾಡಿದ ಸ್ಥಳವಾದ್ದರಿಂದ ತಿರುನಾವಾಯ್ ಎಂಬ ಹೆಸರು ಬಂದಿತು. ಕಾಶಿಯಲ್ಲಿ ಶ್ರಾದ್ಧ ಮಾಡುವ ರೀತಿ ಇಲ್ಲಿಯೂ ಶ್ರಾದ್ಧ ಮಾಡುತ್ತಾರೆ. ಭಾರತಪುಳ ನದೀ ತೀರದಲ್ಲಿ ಬ್ರಹ್ಮ ವಿಷ್ಣು ದೇವಾಲಯಗಳಿವೆ. ಆದ್ದರಿಂದ ಈ ಸ್ಥಳವನ್ನು ಮುಮ್ಮೂರ್ತಿ ಸ್ಥಳವೆಂದು ಹೆಸರು. ಆದ ಕಾರಣ ಇಲ್ಲಿ

ಶ್ರಾದ್ಧ ಮಾಡುವುದು ವಿಶೇಷ.

ಮೂಲವರ್ : ನಾವಾಯ್ ಮುಕುಂದನ್, ನಾರಾಯಣನ್

ತಾಯಾರ್ : ಮಲರ್‌ಮಂಗೈ ನಾಚ್ಚಿಯಾರ್, ಚಿರುದೇವಿ

ತೀರ್ಥಂ : ಚೆಂಗಮಲ ಸರಸ್, ಭಾರತಪುಳ ನದಿ

ವಿಮಾನಂ : ವೇದ ವಿಮಾನಂ

ಪ್ರತ್ಯಕ್ಷಗೊಂಡಿರುವುದು: ಲಕ್ಷ್ಮಿ, ಗಜೇಂದ್ರ, ನವಯೋಗಿಗಳು

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್, 2. ನಮ್ಮಾಳ್ವಾರ್



# 77. ತಿರುವಿತ್ತುವ ಕ್ಕೋಡು (ತಿರುವಿಚ್ಚಿಕ್ಕೋಡು)

॥ ಓಂ ಶ್ರೀವಿದ್ವಕೋಟುವಲ್ಲಿ ಸಮೇತ ಶ್ರೀಉಯ್ಯವಂದ ಸ್ವಾಮಿನೇ ನಮಃ ॥

ಷೋರನೂರು–ಗುರುವಾಯೂರು ರಸ್ತೆಯಲ್ಲಿ ಷೋರನೂರು ಸಮೀಪದ ಪಟ್ಟಾಂಭಿ ರೈಲ್ವೆ ನಿಲ್ದಾಣದ ದಕ್ಷಿಣಕ್ಕೆ 3 ಕಿ.ಮೀ. ದೂರದಲ್ಲಿ ಈ ದಿವ್ಯ ಕ್ಷೇತ್ರವಿದೆ. ಬಸ್‌ಗಳು ವಿರಳ. ಪಟ್ಟಾಂಭಿಯಿಂದ ಆಟೋ ಅಥವಾ ಟ್ಯಾಕ್ಸಿಯಲ್ಲಿ ಹೋಗಿ ಬರಬಹುದು. ಮುಖ್ಯ ರಸ್ತೆಯಿಂದ ಒಳಗಡೆ 1 ಕಿ.ಮೀ. ಒಳಗಿದ್ದು ಮಣ್ಣು ರಸ್ತೆ ಮಾತ್ರವಿದೆ.

ಒಂದು ಪ್ರಾಕರವಿದೆ. ಗರ್ಭಗುಡಿ ವರ್ತುಲಾಕಾರವಾಗಿದೆ. ಮೇಲ್ಚಾವಣಿ ತಾಮ್ರಪಟದಿಂದ ಮುಚ್ಚಿದೆ. ದೇವಸ್ಥಾನದ ಮಹಾದ್ವಾರದ ಎದುರು ಒಂದು ಶಿವ ಸನ್ನಿಧಿ ಇದ್ದು ಅದರ ಹಿಂದೆ ಒಂದು ವಿಷ್ಣು ಸನ್ನಿಧಿ ಇದೆ. ದೇವಸ್ಥಾನವು ಭರತಪುಳಾ ನದಿಯ ದಡದಲ್ಲಿದೆ.

ಪಂಚಪಾಂಡವರು ಪೂಜೆ ಮಾಡಿದ ಸ್ಥಳವಾದ್ದರಿಂದ ಪಂಚಪಾಂಡವ ಸ್ಥಳ ಎಂದು ಹೆಸರು. ಧರ್ಮರಾಜನು ಒಂದು ಕಡೆ, ಅರ್ಜುನನು ಒಂದು ಕಡೆ, ಭೀಮಸೇನ ಒಂದು ಕಡೆ ನಕುಲ ಸಹದೇವರು ಒಂದು ಕಡೆ ಪೂಜೆ ಮಾಡಿದರು. ಈ ನಾಲ್ಕೂ ಜನಕ್ಕೆ ನಾಲ್ಕು ಜಾಗದಲ್ಲಿ ನಾರಾಯಣನು ದರ್ಶನ ನೀಡಿದ್ದಾನೆ. ಆದ್ದರಿಂದ ಇಲ್ಲಿ ನಾಲ್ಕು ಮೂಲದೇವರುಗಳಿವೆ.

**ಮೂಲವರ್ : ಉಯ್ಯವಂದ ಪೆರುಮಾಳ್, ಅಭಯ ಪ್ರದನ್**
**ತಾಯಾರ್ : ವಿದ್ವಕೋಟುವಲ್ಲಿ, ಪದ್ಮವಾಣಿ ನಾಚ್ಚಿಯಾರ್**
**ತೀರ್ಥಂ : ಚಕ್ರತೀರ್ಥಂ, ಭಾರತಪುಳ ನದಿ**
**ವಿಮಾನಂ : ತತ್ತ್ವಕಾಂಚನ ವಿಮಾನಂ**
**ಪ್ರತ್ಯಕ್ಷಗೊಂಡಿರುವುದು: ಅಂಬರೀಷನ್, ಪಂಚಪಾಂಡವರು**

**ಮಂಗಳಶಾಸನ ಮಾಡಿರುವವರು :**

**1. ಕುಲಶೇಖರ ಆಳ್ವಾರ್**

# 78. ತಿರುಕಾಟ್‌ಕರೈ

॥ ಓಂ ಶ್ರೀವಾತ್ಸಲ್ಯವಲ್ಲಿ ಸಮೇತ ಶ್ರೀಕಾಟ್ಕರೆಯಪ್ಪ ಸ್ವಾಮಿನೇ ನಮಃ ॥

ಆಲ್ವಾಯ್ – ತಿರುಯಚ್ಚೂರ್ ರೈಲು ಮಾರ್ಗದ ನಡುವೆ ಇದೆ. ಅಂಗಮಾಲಿ ರೈಲ್ವೆ ನಿಲ್ದಾಣದಿಂದ 15 ಕಿ.ಮೀ. ದೂರದಲ್ಲಿದೆ. ವಾಹನ ಸೌಕರ್ಯವಿರುವುದರಿಂದಲೂ ತಿರುಕಾಟ್ಕರೈನಲ್ಲಿ ವಸತಿ, ಭೋಜನ ಸೌಕರ್ಯಗಳು ಇಲ್ಲದೆ ಇರುವುದರಿಂದಲೂ ಎರ್ನಾಕುಳಂನಲ್ಲಿ ಇಳಿದುಕೊಳ್ಳುವುದೇ ಲೇಸು.

ಈ ಸ್ಥಳ ವಾಮನ ಕ್ಷೇತ್ರ, ಓಣಂ ಹಬ್ಬದಂದು ಪ್ರತಿಯೊಬ್ಬರೂ ತಮ್ಮ ಮನೆಗಳ ಮುಂದೆ ರಂಗೋಲಿ ಹಾಕಿ ವಾಮನನನ್ನು ಸ್ವಾಗತಿಸುತ್ತಾರೆ. ಆಗ ವಾಮನನು ಬರುತ್ತಾನೆಂಬ ನಂಬಿಕೆ.

ಇಲ್ಲಿ ಒಬ್ಬ ರೈತನು ತನ್ನ ತೋಟದಲ್ಲಿ ಬಾಳೆ ಗಿಡಗಳನ್ನು ಹಾಕಿರುತ್ತಾನೆ. ಆದರೆ ಬಾಳೆ ಫಸಲು ಬರುವುದೇ ಇಲ್ಲ. ಆತನಿಗೆ ತುಂಬಾ ನಷ್ಟವಾಗುತ್ತದೆ. ಆದ್ದರಿಂದ ಆತನು ದೇವರಿಗೆ ಬಂಗಾರದಲ್ಲಿ ಬಾಳೆ ಮರವನ್ನು ಮಾಡಿ ಪ್ರಾರ್ಥನೆಗೈದು ದೇವರಿಗೆ ಅರ್ಪಿಸುತ್ತಾನೆ. (ಪ್ರಾರ್ಥನೆ – ನೇಂದ್ರ) ಒಂದು ದಿನ ರಾತ್ರಿ ರೈತನ ಕನಸಲ್ಲಿ ದೇವರು ಬಂದು ಮತ್ತೆ ತೋಟದಲ್ಲಿ ಬಾಳೆ ಗಿಡಗಳನ್ನು ಹಾಕು ಎಂದು ಹೇಳುತ್ತಾನೆ. ಅದರಂತೆ ರೈತನು ತನ್ನ ತೋಟದಲ್ಲಿ ಬಾಳೆ ಗಿಡಗಳನ್ನು ಹಾಕುತ್ತಾನೆ. ಅತ್ಯಾಶ್ಚರ್ಯವೆಂಬಂತೆ ಪ್ರಪಂಚದಲ್ಲಿ ಎಲ್ಲಿಯೂ ಇರದ ಅತ್ಯಂತ ಉದ್ದವಾದ ಬಾಳೆಕಾಯಿಗಳುಳ್ಳ ಬಾಳೆಗೊನೆಗಳು ಬೆಳೆದವು. ಪ್ರಾರ್ಥನೆ ಮಾಡಿ ಬಾಳೆ ಗಿಡಗಳನ್ನು ಹಾಕಿ ಬಾಳೆ ಫಸಲು ಚೆನ್ನಾಗಿ ಬಂದದ್ದರಿಂದ ನೇಂದ್ರ ಬಾಳೆ ಎಂಬ ಹೆಸರು ಬಂದಿತು.

ಮೂಲವರ್ : ಕಾಟ್ಕರೆಯಪ್ಪ

ತಾಯಾರ್ : ವಾತ್ಸಲ್ಯವಲ್ಲಿ

ತೀರ್ಥಂ : ಕಪಿಲ ತೀರ್ಥಂ

ವಿಮಾನಂ : ಪುಷ್ಕಳ ವಿಮಾನಂ

ಪ್ರತ್ಯಕ್ಷಗೊಂಡಿರುವುದು : ಕಪಿಲ ಮುನಿ

ಮಂಗಳಶಾಸನ ಮಾಡಿರುವವರು : 1. ನಮ್ಮಾಳ್ವಾರ್

# 79. ತಿರುಮೂಳಿಕಳಂ

॥ ಓಂ ಶ್ರೀಮಧುರವೇಣಿ ಸಮೇತ ಶ್ರೀತಿರುಮೂಳಿಕಳತ್ತಾನ್ ಸ್ವಾಮಿನೇ ನಮಃ ॥

ಕೊಚ್ಚಿನ್–ಷೋರನೂರು ದಾರಿಯಲ್ಲಿ ಆಳ್ವಾಯ್(ಆಲ್ವೇ)ಗೆ ಉತ್ತರದಲ್ಲಿ ಅಂಗಮಾಲಿ ರೈಲ್ವೆ ನಿಲ್ದಾಣವಿದೆ. ಇಲ್ಲಿಂದ ಪೂರ್ವದಲ್ಲಿ ಹೆದ್ದಾರಿಯಲ್ಲಿ 6 ಮೈಲಿಗಳ ದೂರದಲ್ಲಿ ಈ ದಿವ್ಯದೇಶವಿದೆ. ಆಳ್ವಾಯ್‌ಯಿಂದಲೂ ಇಲ್ಲಿಗೆ ಬರಬಹುದು. ಇಲ್ಲಿ ಛತ್ರವೊಂದಿದೆ.

ಚಿತ್ರಕೂಟದಲ್ಲಿ ರಾಮನು ನೆಲಸಿರುವಾಗ ಭರತನು ಬಂದು ರಾಮನ ಪಾದುಕೆಗಳನ್ನು ಬೇಡುತ್ತಾನೆ. ಅಷ್ಟರಲ್ಲಿ ಲಕ್ಷ್ಮಣನು ಭರತನನ್ನು ಕಂಡು ಅವನೇಕೆ ಇಲ್ಲಿಗೆ ಬರುತ್ತಾನೆಂದು ನಿಷ್ಠುರವಾಗಿ ಮನಸ್ಸಿನಲ್ಲಿ ನಿಂದಿಸಿಕೊಳ್ಳುತ್ತಿರುತ್ತಾನೆ. ಆದರೆ ಭರತನು ರಾಮನನ್ನು ಆಲಿಂಗಿಸಿಕೊಂಡು ಪಾದುಕೆಗಳನ್ನು ತೆಗೆದುಕೊಂಡಾಗ ಲಕ್ಷ್ಮಣನಿಗೆ ತನ್ನ ತಪ್ಪಿನ ಅರಿವಾಗಿ ಪಶ್ಚಾತಾಪದಿಂದ ನಾರಾಯಣನಿಗೆ ಈ ಸ್ಥಳದಲ್ಲಿ ಪೂಜೆ ಸಲ್ಲಿಸುತ್ತಾನೆ. ಈ ದೇವಾಲಯವನ್ನು ಲಕ್ಷ್ಮಣ ಜೀರ್ಣೋದ್ಧಾರ ಮಾಡಿದ್ದಾನೆ. ಆದ್ದರಿಂದ ಈ ಕ್ಷೇತ್ರಕ್ಕೆ ಲಕ್ಷ್ಮಣ ಕ್ಷೇತ್ರ ಎಂಬ ಹೆಸರು ಬಂದಿದೆ.

ಮೂಲವರ್ : ತಿರುಮೂಳಿಕಳತ್ತಾನ್

ತಾಯಾರ್ : ಮಧುರವೇಣಿ ನಾಚ್ಚಿಯಾರ್

ತೀರ್ಥಂ : ಶಂಖ ತೀರ್ಥಂ, ಚಿಟ್ರಾರು

ವಿಮಾನಂ : ಸೌಂದರ್ಯ ವಿಮಾನಂ

ಪ್ರತ್ಯಕ್ಷಗೊಂಡಿರುವುದು : ಹಾರಿದ ಮಹರ್ಷಿ

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್, 2. ನಮ್ಮಾಳ್ವಾರ್



# 80. ತಿರುವಲ್ಲವಾಳ್ (ತಿರುವಲ್ಲ)

॥ ಓಂ ಶ್ರೀಲಕ್ಷ್ಮಿ ಸಮೇತ ಶ್ರೀಕೋಲಬಿರಾನ್ ಸ್ವಾಮಿನೇ ನಮಃ ॥

ಕೊಲ್ಲಂ ಎರ್ನಾಕುಲಂ ರೈಲು ಮಾರ್ಗದಲ್ಲಿ ತಿರುವಲ್ಲ ರೈಲು ನಿಲ್ದಾಣದಿಂದ 5 ಕಿಮೀ ದೂರದಲ್ಲಿದೆ.

ಇಲ್ಲಿನ ಚದುರಂಗ ಕೋಟಿ ವಿಮಾನದ ಪಕ್ಕದಲ್ಲಿ ಚಕ್ರತ್ತಾಳ್ವಾರ್‌ರವರನ್ನು (ಸುದರ್ಶನ ಚಕ್ರವನ್ನು) ಪ್ರತಿಷ್ಠಾಪಿಸಲಾಗಿದೆ. ಈ ಸನ್ನಿಧಿಯಲ್ಲಿ ವಿಭೂತಿಯನ್ನು ವಿನಿಯೋಗ ಮಾಡುವುದು ಆಶ್ಚರ್ಯವೇ! ಇಲ್ಲಿ ಪುರುಷರಿಗೆ ಮಾತ್ರವೇ ಪ್ರವೇಶ. ಸ್ತ್ರೀಯರಿಗೆ ಇಲ್ಲ. ಅವರು ಹೊರಗಿನಿಂದ ಮಾತ್ರ ದರ್ಶನ ಮಾಡಬಹುದು. ಇಲ್ಲಿನ ಧ್ವಜ ಸ್ತಂಭವು ಬಹಳ ದೊಡ್ಡದಾಗಿದ್ದು, ಆಕರ್ಷಕವಾಗಿದೆ.

ಕಂದಾಕರ್ಣನ್ ಎಂಬ ಶಿವಭಕ್ತನು ತನ್ನ ಕಿವಿಯಲ್ಲಿ ಶಿವನಾಮ ಕೇಳಿಸದೆ ಕೇವಲ ಕೃಷ್ಣನಾಮವಷ್ಟೇ ಕೇಳಬೇಕೆಂದು ದೇವರಲ್ಲಿ ಕೇಳಿಕೊಂಡು ಮೋಕ್ಷವನ್ನು ಹೊಂದಿದನು.

ಮೂಲವರ್ : ಕೋಲಪಿರಾನ್, ತಿರುವಾಳ್‌ಮಾರ್ಬನ್, ಶ್ರೀವಲ್ಲಭನ್
ತಾಯಾರ್ : ವಾತ್ಸಲ್ಯದೇವಿ
ತೀರ್ಥಂ : ಕಂದಾಕರ್ಣ ತೀರ್ಥಂ, ಪಂಪಾ ನದಿ
ವಿಮಾನಂ : ಚದುರಂಗ ಕೋಲ ವಿಮಾನಂ
ಪ್ರತ್ಯಕ್ಷಗೊಂಡಿರುವುದು : ಕಂದಾಕರ್ಣನ್

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್, 2. ನಮ್ಮಾಳ್ವಾರ್



# 81. ತಿರುಕ್ಕಡಿತಾನಂ

॥ ಓಂ ಶ್ರೀಕರ್ಪಗವಲ್ಲಿ ಸಮೇತ ಶ್ರೀಅದ್ಭುತನಾರಾಯಣ ಸ್ವಾಮಿನೇ ನಮಃ ॥

ಶೇಂಗಣೂರ್‌ಗೆ ವಾಯುವ್ಯದಲ್ಲಿ 14 ಮೈಲಿ ದೂರದಲ್ಲಿ ಕೊಟ್ಟಾಯಂಗೆ ದಕ್ಷಿಣದಲ್ಲಿನ ಚೆಂಗನಾಶೆರ್‍ರಿಯಿಂದ ಮಣ್ಣಿನ ದಾರಿಯಲ್ಲಿ ಪೂರ್ವಕ್ಕೆ ಎರಡು ಮೈಲಿ ದೂರ ಹೋದರೆ ಈ ದಿವ್ಯದೇಶ ಸಿಗುತ್ತದೆ. ಹೆಚ್ಚು ಸೌಕರ್ಯಗಳಿರುವ ಚೆಂಗನಾಶೆರ್‍ರಿಯಲ್ಲಿ ಇಳಿದುಕೊಂಡು ಇಲ್ಲಿಗೆ ಬಸ್, ಆಟೋಗಳಲ್ಲಿ ಬರಬಹುದು. ಬಹು ಸಣ್ಣ ಗ್ರಾಮ. ಯಾವ ಸೌಕರ್ಯವೂ ಇಲ್ಲ. ಈ ಸನ್ನಿಧಿಯ ದೇವರನ್ನು ಪಂಚಪಾಂಡವರಲ್ಲಿ ಓರ್ವನಾದ ಸಹದೇವನು ಪ್ರತಿಷ್ಠಾಪಿಸಿದನೆಂದು ಹೇಳುತ್ತಾರೆ.

ಈ ಸ್ಥಳದಲ್ಲಿ ಒಂದು ಘಳಿಗೆ (ಅರ್ಧ ಘಂಟೆ) ಧ್ಯಾನಿಸಿದರೆ ತಮಗೆ ಕಾರ್ಯಸಿದ್ಧಿಯಾಗುತ್ತದೆ. 1. ತಿರುಕ್ಕಡಿತಾಣಂ, 2. ತಿರುಕ್ಕಡಿಗೈ(ಶೋಲಿಂಗರ್), 3. ತಿರುಖಂಡಂಕಡಿನಗರ್ (ದೇವಪ್ರಯಾಗ್) – ಈ ಮೂರೂ ಸ್ಥಳಗಳು ಮೋಕ್ಷಕ್ಕೆ ದಾರಿ ಮಾಡಿಕೊಡುವ ಸ್ಥಳಗಳು.

ಮೂಲವರ್ : ಅದ್ಭುತ ನಾರಾಯಣ

ತಾಯಾರ್ : ಕರ್ಪಗವಲ್ಲಿ

ತೀರ್ಥಂ : ಭೂಮಿ ತೀರ್ಥಂ

ವಿಮಾನಂ : ಪುಣ್ಯಕೋಟಿ ವಿಮಾನಂ

ಪ್ರತ್ಯಕ್ಷಗೊಂಡಿರುವುದು : ರುಕ್ಮಾಂಗದನ್

ಮಂಗಳಶಾಸನ ಮಾಡಿರುವವರು :

1. ನಮ್ಮಾಳ್ವಾರ್



# 82. ತಿರುಚೆಂಗುಂಡ್ರೂರ್ (ತಿರುಚಿಟ್ರಾರು, ಚೆಂಗನೂರ್)

॥ ಓಂ ಶ್ರೀಚೆಂಗಮಲವಲ್ಲಿ ಸಮೇತ ಶ್ರೀಇಮಯವರಪ್ಪ ಸ್ವಾಮಿನೇ ನಮಃ ॥

ತಿರುವನಂತಪುರಂ-ಎರ್ನಾಕುಲಂ ದಾರಿಯಲ್ಲಿ ಚೆಂಗನೂರ್ ರೈಲ್ವೇ ನಿಲ್ದಾಣ ಬಳಿ ಈ ಸ್ಥಳ ಇದೆ. ಇದನ್ನು ತಿರುಶೆಂಕುಂಡ್ರೂರ್, ತಿರುಚಿಟ್ರಾರು, ವಿಷ್ಣುಕೋಯಿಲ್ ಎಂಬ ಹೆಸರುಗಳಿಂದಲೂ ಕರೆಯುತ್ತಾರೆ.

ಕುರುಕ್ಷೇತ್ರ ಯುದ್ಧದಲ್ಲಿ ಧರ್ಮರಾಜನು ಅಶ್ವತ್ಥಾಮ ಹತಃ ಕುಂಜರಃ ಎಂಬ ಮಿಥ್ಯವನ್ನು ಹೇಳಿರುವ ಪಾಪ ಪ್ರಾಯಶ್ಚಿತ್ತವಾಗಿ ಈ ದೇಗುಲವನ್ನು ಜೀರ್ಣೋದ್ಧಾರ ಮಾಡಿದನು.

ಮೂಲವರ್ : ಇಮೈಯವರಪ್ಪನ್
ತಾಯಾರ್ : ಚೆಂಗಮಲವಲ್ಲಿ
ತೀರ್ಥಂ : ಶಂಖ ತೀರ್ಥಂ, ತಿರುಚಿಟ್ರಾರು
ವಿಮಾನಂ : ಜಗಜ್ಜ್ಯೋತಿ ವಿಮಾನಂ
ಪ್ರತ್ಯಕ್ಷಗೊಂಡಿರುವುದು : ರುದ್ರ

ಮಂಗಳಶಾಸನ ಮಾಡಿರುವವರು : 1. ನಮ್ಮಾಳ್ವಾರ್

# 83. ತಿರುಪ್ಪುಲಿಯೂರ್ (ಕುಟ್ಟನಾಡು)

॥ ಓಂ ಶ್ರೀಪೊರ್‌ಪಡಿ ಸಮೇತ ಶ್ರೀಮಾಯಪ್ರಾಣ್ ಸ್ವಾಮಿನೇ ನಮಃ ॥

ಚೆಂಗನೂರ್‌ನಿಂದ 5 ಕಿಮೀ ದೂರದಲ್ಲಿ ಈ ಕ್ಷೇತ್ರವಿದೆ. ಈ ದೇಗುಲವನ್ನು ಭೀಮಸೇನನು ಪ್ರತಿಷ್ಠಾಪಿಸಿದನು.

ಮೂಲವರ್ : ಮಾಯಪ್ರಾಣ್
ತಾಯಾರ್ : ಪೊರ್‌ಪೊಡಿ ನಾಚ್ಚಿಯಾರ್
ತೀರ್ಥಂ : ಪ್ರಜಾ ಸರಸ್
ವಿಮಾನಂ : ಪುರುಷೋತ್ತಮ ವಿಮಾನಂ
ಪ್ರತ್ಯಕ್ಷಗೊಂಡಿರುವುದು : ಸಪ್ತ ಋಷಿಗಳು

ಮಂಗಳಶಾಸನ ಮಾಡಿರುವವರು : 1. ನಮ್ಮಾಳ್ವಾರ್, 2.ತಿರುಮಂಗೈಆಳ್ವಾರ್

# 84. ತಿರುವಾರನ್ ವಿಳೈ

॥ ಓಂ ಶ್ರೀಪದ್ಮಾಸಿನಿ ಸಮೇತ ಶ್ರೀತಿರುಕ್ಕುರಳಪ್ಪ ಸ್ವಾಮಿನೇ ನಮಃ ॥

ಇದನ್ನು ಆರಮುಳ ಎಂದೂ ಕರೆಯುತ್ತಾರೆ. ಶೇಂಗಣೂರ್‌ಗೆ ಪೂರ್ವದಲ್ಲಿ, ರಾಷ್ಟ್ರೀಯ ಹೆದ್ದಾರಿಯಲ್ಲಿ 7 ಮೈಲಿ ದೂರದಲ್ಲಿ ಈ ದಿವ್ಯ ಕ್ಷೇತ್ರವಿದೆ.

ಈ ದಿವ್ಯದೇಶವೂ ಪಂಪಾನದಿ ತೀರದಲ್ಲಿದೆ. ಕುರುಕ್ಷೇತ್ರ ಯುದ್ಧದಲ್ಲಿ ಕರ್ಣನು ತನ್ನ ರಥವು ಭೂಮಿಯಲ್ಲಿ ಹೂತುಹೋಗಿರುವುದರಿಂದ ಬಾಣ ಬಿಡಬೇಡವೆಂದು ಹೇಳಿದರೂ ಅರ್ಜುನನು ಬಾಣ ಬಿಟ್ಟು ಕರ್ಣನನ್ನು ಕೊಲ್ಲುತ್ತಾನೆ. ಆ ಪಾಪ ಪರಿಹಾರಾರ್ಥವಾಗಿ ಈ ಸ್ಥಳದಲ್ಲಿ ದೇವರನ್ನು ಪ್ರತಿಷ್ಠಾಪಿಸಿದನು.

ಇಲ್ಲಿನ ಮೂಲದೇವರಿಗೆ ಅನುದಿನವೂ ತಿರುಮಂಜನ ಮಾಡಿಸಿ, ಹಲವು ಪುಷ್ಪಗಳಿಂದ ಅಲಂಕರಿಸಿರುವ ವೈವಿಧ್ಯತೆಯನ್ನು ನೋಡುವುದೇ ಒಂದು ವಿಶೇಷ. ಆನಂದಮಯ, ಇದರ ಪಕ್ಕದಲ್ಲೇ ಒಂದು ಶಿವಾಲಯವಿದೆ.

**ಮೂಲವರ್ : ತಿರುಕ್ಕುರಲ್ ಅಪ್ಪನ್**

**ತಾಯಾರ್ : ಪದ್ಮಾಸಿನಿ ನಾಚ್ಚಿಯಾರ್**

**ತೀರ್ಥಂ : ಪಂಪಾ ತೀರ್ಥಂ**

**ವಿಮಾನಂ : ವಾಮನ ವಿಮಾನಂ**

**ಪ್ರತ್ಯಕ್ಷಗೊಂಡಿರುವುದು : ಬ್ರಹ್ಮ, ವೇದವ್ಯಾಸ**

**ಮಂಗಳಶಾಸನ ಮಾಡಿರುವವರು :**

**1. ನಮ್ಮಾಳ್ವಾರ್**



# 85. ತಿರುವನ್‌ವಂಡೂರ್

॥ ಓಂ ಶ್ರೀಕಮಲವಲ್ಲಿ ಸಮೇತ ಶ್ರೀಪಾಂಬನ್ನೈಯಪ್ಪ ಸ್ವಾಮಿನೇ ನಮಃ ॥

ಚೆಂಗನೂರಿನಿಂದ 6 ಕಿಮೀ ದೂರದಲ್ಲಿ ಈ ಕ್ಷೇತ್ರವಿದೆ. ಈ ದೇಗುಲವನ್ನು ನಕುಲ ದೇವಸ್ಥಾನವೆಂದು ಕರೆಯುವರು.

ಬ್ರಹ್ಮನಿಂದ ಶಾಪಗ್ರಸ್ಥ ನಾರದನು ಈ ಸ್ಥಳಕ್ಕೆ ಬಂದು ನಾರಾಯಣನನ್ನು ಪೂಜಿಸಿ ತನ್ನ ಶಾಪವನ್ನು ವಿಮೋಚನೆ ಮಾಡಿಕೊಂಡು ತಾನು ಯಾವಾಗಲೂ ತತ್ತ್ವಜ್ಞಾನವನ್ನು ಪ್ರಚಾರ ಮಾಡುವ ವರ ದಯಪಾಲಿಸೆಂದು ಬೇಡಿಕೊಂಡಾಗ ನಾರಾಯಣನು ನಾರದನಿಗೆ ಆ ವರವನ್ನು ದಯಪಾಲಿಸಿದನು. ಅಲ್ಲಿಂದ ಮುಂದೆ ನಾರದನು ಯಾವಾಗಲೂ ನಾರಾಯಣ ನಾರಾಯಣ ಎನ್ನುತ್ತಾ ತತ್ತ್ವಜ್ಞಾನ ಪ್ರಚಾರದಲ್ಲಿ ತೊಡಗಿದನು. ಇದೇ ಸ್ಥಳದಲ್ಲಿ ನಾರದ ಪುರಾಣವನ್ನು ಬರೆದಿರುವುದು. ಮಹಾವಿಷ್ಣುವೇ ಪರತತ್ತ್ವವನ್ನು ಸ್ಥಾಪಸಿ ಅವರನ್ನು ಪೂಜೆ ಮಾಡುವ ವಿಧಾನವನ್ನೂ ತಿಳಿಸಿದನು. ಇಲ್ಲಿಯೇ 25,000 ಗ್ರಂಥಗಳು ರಚಿತವಾದದ್ದು.

ಮೂಲವರ್ : ಪಾಂಬನ್ನೈಅಪ್ಪನ್

ತಾಯಾರ್ : ಕಮಲವಲ್ಲಿ ನಾಚ್ಚಿಯಾರ್

ತೀರ್ಥಂ : ಪಾಪನಾಶ ತೀರ್ಥಂ, ಪಂಪಾ ತೀರ್ಥಂ

ವಿಮಾನಂ : ವೇದಾಲಯ ವಿಮಾನಂ

ಪ್ರತ್ಯಕ್ಷಗೊಂಡಿರುವುದು : ಮಾರ್ಕಂಡೇಯ, ನಾರದ

ಮಂಗಳಶಾಸನ ಮಾಡಿರುವವರು :

1. ನಮ್ಮಾಳ್ವಾರ್



# 86. ತಿರುವನಂತಪುರಂ (ಅನಂತಶಯನಂ)

॥ ಓಂ ಶ್ರೀಹರಿಲಕ್ಷ್ಮಿ ಸಮೇತ ಶ್ರೀಅನಂತಪದ್ಮನಾಭ ಸ್ವಾಮಿನೇ ನಮಃ ॥

ಕೇರಳದ ರಾಜಧಾನಿ ಆಗಿರುವ ಈ ಕೇಂದ್ರವು ಹಿಂದೆ ಬಹಳ ಮುಖ್ಯ ಪಟ್ಟಣವಾಗಿದ್ದು ರೇವು ಪಟ್ಟಣವಾಗಿತ್ತು. ಇದನ್ನು ಅನಂತಶಯನಂ ಎಂದೂ ಕರೆಯುವರು. ಬಹಳ ದೊಡ್ಡ ಊರಾಗಿದ್ದು ಎಲ್ಲ ರೀತಿಯ ಆಧುನಿಕ ಸೌಲಭ್ಯಗಳೂ ಇವೆ. ಶ್ರೀ ಪದ್ಮನಾಭನ ದೇವಸ್ಥಾನವಲ್ಲದೆ ಅನೇಕ ಪ್ರೇಕ್ಷಣೀಯ ಸ್ಥಳಗಳೂ ಉಂಟು. ದೇವಸ್ಥಾನವು ರೈಲ್ವೆ ಸ್ಟೇಷನ್ ಹಾಗೂ ಬಸ್ ನಿಲ್ದಾಣದಿಂದ ಸುಮಾರು ಒಂದೂವರೆ ಕಿ.ಮೀ.ದೂರದಲ್ಲಿದೆ. ಈ ನಗರವು ಸಮುದ್ರಕ್ಕೆ ಎದುರಾಗಿರುವ ಪಶ್ಚಿಮ ಘಟ್ಟಗಳಿಗೆ ಸೇರಿದ ದಿಣ್ಣೆಯ ಮೇಲಿದ್ದು, ಅಲ್ಲಿನ ಕೋಟೆಯ ಮಧ್ಯದಲ್ಲಿ ಅನಂತ ಪದ್ಮನಾಭ ಸ್ವಾಮಿಯ ಸನ್ನಿಧಿಯು ಇದೆ.

ಈ ಗರ್ಭಗೃಹಕ್ಕೆ ಮೂರು ಬಾಗಿಲುಗಳಿದ್ದು, ಈ ಮೂರು ಬಾಗಿಲುಗಳಿಂದ ದರ್ಶಿಸಿದಾಗ ಮಾತ್ರ ಮೂಲದೇವರ ಭವ್ಯ ಆಕಾರದ ಕಲ್ಪನೆಯ ದೊರೆಯುತ್ತದೆ. ಮೊದಲ ಬಾಗಿಲಿನಿಂದ ಸ್ವಾಮಿಯ ಶಿರೋದರ್ಶನ, ಎರಡನೇ ಬಾಗಿಲಿನಿಂದ ಆತನ ನಾಭಿ ದರ್ಶನ ಮತ್ತು ಮೂರನೇ ಬಾಗಿಲಿನಿಂದ ಆತನ ಪಾದ ದರ್ಶನಗಳನ್ನು ಬಿಡಿಬಿಡಿಯಾಗಿ ಮಾಡಬಹುದಾಗಿದೆ. ಉತ್ಸವ ಮೂರ್ತಿಯು ಚಿಕ್ಕದಾಗಿ ಸುಂದರವಾಗಿದ್ದು, ಸಂಪೂರ್ಣ ಚಿನ್ನದಿಂದ ಮಾಡಿರುವುದಾಗಿ ಐತಿಹ್ಯ.

ದಿವಾಕರ ಯೋಗಿ ಎಂಬ ಋಷಿ ಮುಕ್ತಿ ಪ್ರಾಪ್ತಿಗೋಸ್ಕರ ಸದಾ ಹರಿಪೂಜೆ ಮಾಡುತ್ತಿದ್ದರು. ಇವರು ಪೂಜೆ ಮಾಡುತ್ತಿರುವಾಗ ಭಗವಂತನು ಎರಡು ವರ್ಷದ ಮಗುವಿನ ರೀತಿ ಬಂದು ಅಲ್ಲಿದ್ದ ಸಾಲಿಗ್ರಾಮವನ್ನು ಬಾಯಲ್ಲಿ ಹಾಕಿಕೊಂಡಿತು. ಅದನ್ನು ನೋಡಿದ ಯೋಗಿ ಆ ಮಗುವನ್ನು ಅಟ್ಟಿಸಿಕೊಂಡು ಹೋಗುವಾಗ ಆ ಮಗು ಒಂದು ಮರದ ಅಡಿಯಲ್ಲಿ ತೂರಿಕೊಂಡಿತು. ಆಗ ಆ ಮರವು ಕೆಳಗೆ ಬಿದ್ದಿತು. ಆನಂತರ ಅಲ್ಲಿಯೇ ಅನಂತಶಯನ ರೂಪದಲ್ಲಿ ದೇವರು ದರ್ಶನವನ್ನು ಕೊಟ್ಟನು. ದೇವರು ಅನಂತಶಯನನಾಗಿ (ಅನಂತ ರೂಪವುಳ್ಳ) ದರ್ಶನ ನೀಡಿದ್ದರಿಂದ ಮೂರು ಬಾಗಿಲುಗಳಲ್ಲಿ ದರ್ಶನ ಮಾಡಬೇಕು.

ತಿರುವಾಂಕೂರಿನ ಮಹಾರಾಜರುಗಳೆಲ್ಲರೂ ಈ ದೇವನ ಭಕ್ತರಾಗಿದ್ದರು. ಈ ರಾಜರುಗಳು ತಮ್ಮ ಮನೆದೇವರಾದ ಈ ದೇವನ ನೆನಪಿಗಾಗಿ, ತಮ್ಮನ್ನು (ಅನಂತ) ಪದ್ಮನಾಭದಾಸ ಎಂದು ಕರೆದುಕೊಳ್ಳುತ್ತಿದ್ದರು.

ಈ ದೇವಾಲಯವು ತುಂಬಾ ವಿಶಾಲವಾಗಿದೆ. ಗರ್ಭಗುಡಿಯಿಂದ ದಕ್ಷಿಣದಲ್ಲಿ ಯೋಗಾನರಸಿಂಹರಿಗೆ ಪ್ರತ್ಯೇಕ ಸನ್ನಿಧಿ ಇದೆ. ಸನ್ನಿಧಿಯ ಹಿಂಭಾಗದಲ್ಲಿ ಶ್ರೀ ಕೃಷ್ಣನ ಸನ್ನಿಧಿ ಇದೆ. ಮಹಾದ್ವಾರದಿಂದ ಒಳಗಡೆಗೆ ಎಡಭಾಗದಲ್ಲಿ ಅದ್ಭುತವಾದ ಏಕಶಿಲೆಯ ಸಭಾ ಮಂಟಪವಿದೆ. ಶಿಲ್ಪ ಕಲೆಗೆ ಹೆಸರಾದ ಈ ಸಭಾ ಮಂಟಪವು ವಿವಿಧ ನಾದ ನೀಡುವ ಕಂಬಗಳನ್ನು ಹೊಂದಿದೆ. ಈ ದೇವಾಲಯದಲ್ಲಿ ನಡೆಯುವ ಲಕ್ಷದೀಪೋತ್ಸವವು ಬಹಳ ಪ್ರಸಿದ್ಧವಾದುದು. ಅಂತೆಯೇ ಇಲ್ಲಿನ ನವರಾತ್ರಿ ಉತ್ಸವವು ಚಿರಸ್ಮರಣೀಯವಾದುದು.

ಈ ದೇಗುಲದಲ್ಲಿ ಗಂಡಸರು ಬರೀ ಪಂಚೆ, ಹೆಂಗಸರು ಸೀರೆ, ಹೆಣ್ಣು ಮಕ್ಕಳು ಲಂಗ ದಾವಣಿ ಧರಿಸಿ ದರ್ಶನ ಮಾಡಬೇಕು.

**ಮೂಲವರ್ : ಅನಂತಪದ್ಮನಾಭ, ಅನಂತಶಯನ**

**ತಾಯಾರ್ : ಶ್ರೀ ಹರಿಲಕ್ಷ್ಮಿ**

**ತೀರ್ಥಂ : ಮತ್ಸ್ಯ ತೀರ್ಥಂ, ಪದ್ಮ ತೀರ್ಥಂ, ವರಾಹ ತೀರ್ಥಂ**

**ವಿಮಾನಂ : ಹೇಮಕೂಟ ವಿಮಾನಂ**

**ಪ್ರತ್ಯಕ್ಷಗೊಂಡಿರುವುದು : ಇಂದ್ರ, ಚಂದ್ರ, ಏಕಾದಶ ರುದ್ರ**

**ಮಂಗಳಶಾಸನ ಮಾಡಿರುವವರು :**

**1. ನಮ್ಮಾಳ್ವಾರ್**



# 87. ತಿರುವಟ್ಟಾರು

॥ ಓಂ ಶ್ರೀಮರಗದವಲ್ಲಿ ಸಮೇತ ಶ್ರೀಆದಿಕೇಶವ ಸ್ವಾಮಿನೇ ನಮಃ ॥

ನಾಗರ್ ಕೋಯಿಲ್- ತಿರುವನಂತಪುರಂ ಹೆದ್ದಾರಿಯಲ್ಲಿ ತೊಡುವಟ್ಟಿ ಎಂಬ ಊರಿನಲ್ಲಿಳಿದು, ಅಲ್ಲಿ ಬೇರೆ ಬಸ್‌ನಲ್ಲಿ 9 ಕಿಮೀ ಉತ್ತರದ ಕಡೆ ಹೋದರೆ ಈ ಕ್ಷೇತ್ರವು ಸಿಗುವುದು.

ಇಲ್ಲಿ ಕೇಶಿ ಎಂಬ ರಾಕ್ಷಸನ ಸಂಹಾರಕ್ಕಾಗಿ ನಾರಾಯಣನು ಮಲ್ಲಯುದ್ಧ ಮಾಡುವ ಸಂದರ್ಭದಲ್ಲಿ ಕೇಶಿ ರಾಕ್ಷಸನ ಪತ್ನಿ ಶಿವಭಕ್ತೆ. ಗಂಗೆಯನ್ನು ಕರೆದಳು. ಗಂಗೆಯನ್ನು ಕರೆದಾಗ ಈ ಸ್ಥಳದಲ್ಲಿ ಎರಡು ಮಾರ್ಗವಾಗಿ ಬೇರ್ಪಟ್ಟು ಮತ್ತೆ ಒಂದಾಗಿ ಮುಂದೆ ಹೋಗುವಳು. ಎರಡು ಮಾರ್ಗವಾಗಿ ಬೇರ್ಪಟ್ಟದ್ದರಿಂದ ಈ ಸ್ಥಳವನ್ನು ತಿರುವಟ್ಟಾರು ಎಂದು ಕರೆಯುವರು. ಈ ಕ್ಷೇತ್ರದ ಎರಡೂ ಪಕ್ಕಗಳಲ್ಲಿ ಪುಟ್ಟ ನದಿಗಳು ಪ್ರವಹಿಸುವುದರಿಂದ, ಇದನ್ನು ತಿರುವಟ್ಟಾರು ಎಂದು ಕರೆಯುತ್ತಾರೆ. ಈ ಗ್ರಾಮವು ಚಿಕ್ಕದಾದರೂ ಸಕಲ ಸೌಕರ್ಯಗಳೂ ಇದ್ದು, ಅಂಗಡಿ ಹೋಟೆಲುಗಳು ಬೇಕಾದಷ್ಟಿವೆ. ರಾತ್ರಿ ಬೇಕಾದರೂ ಉಳಿದುಕೊಳ್ಳಬಹುದು. ಟ್ರಿವೇಂಡ್ರಂನಿಂದ ಆಟೋದಲ್ಲಿಯೂ ಹೋಗಿ ಬರಬಹುದು. ಇದು ಪರಶುರಾಮ ಕ್ಷೇತ್ರವೆಂದು ಹೆಸರು ಪಡೆದಿದೆ. ಇಲ್ಲಿನ ಏಕಶಿಲಾ ಮಂಟಪದಲ್ಲಿ ದೇವರನ್ನು ಸೇವಿಸಲು, ಅದರ ಗೋಡೆಗಳನ್ನು ಮುಟ್ಟಲು ಬ್ರಾಹ್ಮಣೇತರರಿಗೆ ಅವಕಾಶ ಕೊಟ್ಟಿಲ್ಲ.

ಮೂಲವರ್ : ಆದಿಕೇಶವ ಪೆರುಮಾಳ್

ತಾಯಾರ್ : ಮರಗದವಲ್ಲಿ

ತೀರ್ಥಂ : ಗಂಗ, ವಟ್ಟಾರು

ವಿಮಾನಂ : ಅಷ್ಟಾಂಗ

ಪ್ರತ್ಯಕ್ಷಗೊಂಡಿರುವುದು : ಪರಶುರಾಮ, ಚಂದ್ರ

ಮಂಗಳಶಾಸನ ಮಾಡಿರುವವರು :

1. ನಮ್ಮಾಳ್ವಾರ್

# 88. ತಿರುವನ್ಪರಿಸಾರಂ (ತಿರುಪ್ಪತಿಸಾರಮ್)

॥ ಓಂ ಶ್ರೀಕಮಲವಲ್ಲಿ ಸಮೇತ ಶ್ರೀತಿರುಕ್ಕುರಳಪ್ಪ ಸ್ವಾಮಿನೇ ನಮಃ ॥

ನಾಗರ್‌ಕೋಯಿಲ್‌ಗೆ ಈಶಾನ್ಯದಲ್ಲಿ ಒಂದೂವರೆ ಮೈಲಿ ದೂರದಲ್ಲಿ ಈ ಕ್ಷೇತ್ರವಿದೆ. ಈ ಊರು ದೊಡ್ಡದಾಗಿರುವುದರಿಂದ, ಎಲ್ಲ ಸೌಕರ್ಯಗಳೂ ಇಲ್ಲಿವೆ. ನಮ್ಮಾಳ್ವಾರ್‌ರವರ ತಾಯಿಯಾದ ಉಡ್ಯೆಯ ತಿರುಮಂಗ್ಯೆಯಾರ್‌ರವರ ಜನ್ಮಸ್ಥಳವಿದು. ಆಳ್ವಾರರ ತಂದೆಯವರಾದ ತಿರುವಾಳ್ ಮಾರ್ಬನ್‌ರವರ ತಿರುಮಾಳಿಗೆಯು ಈಗ ಭಜನಾ ಮಂದಿರವಾಗಿದೆ. ಇಲ್ಲಿನ ಅರ್ಚಕರು ಉಡುಪಿಯ ಬ್ರಾಹ್ಮಣರು–ನಂಬೂದರಿಗಳು. ದೇವಾಲಯದ ಮುಂದಿರುವ ಕೊಳದಲ್ಲಿ ಸ್ನಾನ ಮಾಡಿ, ನಂತರ ಗರ್ಭಗುಡಿಯನ್ನು ಪ್ರವೇಶಿಸಿ, ಪೂಜೆಯನ್ನು ಮಾಡುವರು. ಈ ಕೊಳದ ದಡದಲ್ಲಿರುವ ಅರಳೀಮರವು ಪವಿತ್ರವಾದುದೆಂದು ಭಕ್ತರು ಪರಿಗಣಿಸುತ್ತಾರೆ.

ಈ ದೇವಸ್ಥಾನವು ತಮಿಳುನಾಡಿಗೆ ಸೇರಿದ್ದಾದಾದರೂ ಕೇರಳ ನಂಬೂದರಿಗಳ ರೀತಿಯಲ್ಲಿ ಪೂಜೆ ಸಲ್ಲಿಸುವರು.

ಹಿರಣ್ಯಕಶಿಪುವಿನ ಸಂಹಾರ ಸಮಯದಲ್ಲಿ ಮಹಾವಿಷ್ಣುವಿನ ನರಸಿಂಹ ಅವತಾರವನ್ನು ಕಂಡು ಭಯಗೊಂಡ ಲಕ್ಷ್ಮಿಯು ಈ ಸ್ಥಳಕ್ಕೆ ಓಡಿ ಬರುತ್ತಾಳೆ. ಅಲ್ಲಿ ಪ್ರಹ್ಲಾದನು ನರಸಿಂಹನನ್ನು ಶಾಂತಗೊಳಿಸಿ ಲಕ್ಷ್ಮಿಯನ್ನು ನಾರಾಯಣನ ಹೃದಯದಲ್ಲಿರಿಸುತ್ತಾನೆ. ಆದ್ದರಿಂದ ಈ ದೇವರನ್ನು ತಿರುವಾಳ್‌ಮಾರ್ಬನ್ ಎಂದು ಕರೆಯುತ್ತಾರೆ.

ಮೂಲವರ್ : ತಿರುವಾಳ್‌ಮಾರ್ಬನ್, ತಿರುಕ್ಕುರಳಪ್ಪನ್
ತಾಯಾರ್ : ಕಮಲವಲ್ಲಿ ನಾಚ್ಚಿಯಾರ್
ತೀರ್ಥಂ : ಲಕ್ಷ್ಮಿ ತೀರ್ಥಂ (ದೊಡ್ಡ ಪುಷ್ಕರಣಿ)
ವಿಮಾನಂ : ಇಂದ್ರ ಕಲ್ಯಾಣ ವಿಮಾನಂ
ಪ್ರತ್ಯಕ್ಷಗೊಂಡಿರುವುದು: ವಿಂಧ್ಯ, ಉಡಯನಂಗ್ಯೆ, ಗರುಡ

ಮಂಗಳಶಾಸನ ಮಾಡಿರುವವರು :

1. ನಮ್ಮಾಳ್ವಾರ್

ಮಲೈನಾಡು ದಿವ್ಯ ದೇಶಂ (ಕೇರಳ ದಿವ್ಯ ದೇಶಂ) ಸಮಾಪ್ತಿ

# ಪಾಂಡ್ಯನಾಡು ತಿರುಪತಿಗಳು

# 89. ತಿರುಕುರುಂಗುಡಿ

॥ ಓಂ ಶ್ರೀಕುರುಂಗುಡಿವಲ್ಲಿ ಸಮೇತ ಶ್ರೀವೈಷ್ಣವನಂಬಿ ಸ್ವಾಮಿನೇ ನಮಃ ॥

ವಾಣಮಾಮಲೈನಿಂದ ನೈಋತ್ಯ ದಿಕ್ಕಿಗೆ ಎಂಟು ಮೈಲಿ ದೂರದಲ್ಲಿ ಈ ಕ್ಷೇತ್ರವಿದೆ. ತಿರುನಲ್ವೇಲಿ ಹಾಗೂ ತೆನ್‌ಕಾಶಿ ರೈಲು ಮಾರ್ಗದಲ್ಲಿ ಚೇರನ್ ಮಹಾದೇವಿ ಎಂಬ ನಿಲ್ದಾಣದಿಂದ ದಕ್ಷಿಣಕ್ಕೆ 10 ಮೈಲಿ ದೂರದಲ್ಲಿ ತಿರುಪಾಲ್ಕಡಲ್ ನದಿಯ ಬಳಿಯಲ್ಲಿದೆ. ಇದು ವಾಮನನು ದಯಮಾಡಿಸಿರುವ ಕ್ಷೇತ್ರವಾದುದರಿಂದ ಈ ಸ್ಥಳಕ್ಕೆ 'ಕುರುಂಗುಡಿ' ಎಂಬ ಹೆಸರು ಬಂದಿದೆ.

ವಡಿವಡಗಿಯನಂಬಿ ರೂಪದಿಂದ ಈ ಸನ್ನಿಧಿಯ ವಡಿ ಅಳಿಗಿಯ ನಂಬಿಯು ಇಲ್ಲಿದ್ದ ಉಡೈವರರನ್ನು ಆಶ್ರಯಿಸಿ, ಮಂತ್ರೋಪದೇಶವನ್ನು ಹೊಂದಿ, 'ಶ್ರೀವೈಷ್ಣವ ನಂಬಿ' ಎನ್ನುವ ದಾಸ್ಯ ನಾಮವನ್ನು ಹೊಂದಿದರು. ಶ್ರೀ ಭಾಷ್ಯಕಾರರ ಕಾಷಾಯ ವಸ್ತ್ರಗಳನ್ನು ಒಣಗಿ ಹಾಕುತ್ತಿದ್ದ ಸ್ಥಳವನ್ನು ಈಗಲೂ ತಿರುವರಿಪಟ್ಟಪಾರೈ (ಬೆಟ್ಟ) ಎಂದು ಕರೆಯುತ್ತಾರೆ. ಇಲ್ಲಿ ಉಡೈವರರು ಆಚಾರ್ಯ ಸ್ಥಾನದಲ್ಲಿದ್ದು ಮಂತ್ರೋಪದೇಶ ಮಾಡುತ್ತಿರುವಂತೆ ಇರುವುದರಿಂದ ಇಲ್ಲಿನ ರಾಮಾನುಜ ವಿಗ್ರಹವು ಚಿನ್ಮುದ್ರ ರೂಪದಲ್ಲಿದೆ.

ಈ ದೇವರಿಗೆ ವಿಷ್ಣುನಂಬಿ ಎನ್ನುವ ಹೆಸರು ಬರಲು ಮತ್ತೂ ಒಂದು ಕಥೆ ಪ್ರಚಲಿತದಲ್ಲಿದೆ.

ಶ್ರೀ ಭಾಷ್ಯಕಾರರು ಇಲ್ಲಿನ ದೇವಾಲಯದಲ್ಲಿ ಭಗವದ್ವಿಷಯದ ಬಗ್ಗೆ ಕಾಲಕ್ಷೇಪ ಮಾಡುತ್ತಿದ್ದರು. ಇದರೊಂದಿಗೆ ತಿರುವಷ್ಟಾಕ್ಷರ ರಹಸ್ಯವನ್ನು ತ್ರಿಳಿಸುತ್ತಿದ್ದರು. ಇದು ತುಂಬಾ ಚೆನ್ನಾಗಿ ಮೂಡಿ ಬರುತ್ತಿದ್ದಿತಂತೆ. ಮಹಾವಿಷ್ಣುವಿಗೂ ಈ ಪವಿತ್ರ ಪ್ರವಚನವನ್ನು ಕೇಳಬೇಕೆಂದು ಆಸೆಯಾಯಿತಂತೆ. ಅದರಿಂದ ಪರಮಾತ್ಮನು ಸಾಮಾನ್ಯ ಶಿಷ್ಯನ ವೇಷವನ್ನು ಧರಿಸಿ ಸಭೆಯಲ್ಲಿ ದೂರದಲ್ಲಿ ಕುಳಿತು ಆಲಿಸುತ್ತಿದ್ದನಂತೆ. ಇದರಿಂದಲೇ ಇಲ್ಲಿನ ಪರಮಾತ್ಮನಿಗೆ 'ವಿಷ್ಣು ನಂಬಿ' ಎಂಬ ಹೆಸರು ಬಂದಿತು.

ಈ ಸ್ಥಳದಲ್ಲಿ ಇನ್ನೂ ಕೆಲವು ದೇವಾಲಯಗಳಿವೆ. ನಿಂಡ್ರನಂಬಿ, ಕಿಡಂದನಂಬಿ ಎನ್ನುವ ಎರಡು ಬೇರೆ ಸನ್ನಿಧಿಗಳಿವೆ. ಈ ಎರಡೂ ಸನ್ನಿಧಿಗಳ ನಡುವೆ

ಒಂದು ಶಿವನ ಆಲಯವಿದೆ. ಅದರಿಂದ ಈ ದೇವರ ಉತ್ಸವ ಹೊರಡುವುದಕ್ಕೆ ಮುಂಚೆ ಆಲಯಗಳ ಪ್ರದಕ್ಷಿಣೆ ಮಾಡುವಾಗ ಉತ್ಸವವು ಶಿವನ ಆಲಯದ ಎದುರು ನಿಲ್ಲುತ್ತದೆ. 'ನಮ್ಮ ಪಕ್ಕದಲ್ಲಿರುವ ಅವನಿಗೆ ಏನಾದರೂ ಕೊರತೆ ಇದೆಯೇ?' ಎಂದು ಕೇಳಲಾಗುತ್ತದೆ. 'ಕೊರತೆ ಏನೂ ಇಲ್ಲ!' ಎಂದು ಶಿವನ ಉತ್ತರ ಸಿಕ್ಕಿದ ಮೇಲೆ ತಿರುವೀದಿಗಳಲ್ಲಿ ಉತ್ಸವ ಹೊರಡುತ್ತದೆ.

ಬಳಿಯ ನದಿ ದಡದಲ್ಲಿರುವ ಸನ್ನಿಧಿಯಲ್ಲಿ ತಿರುಪ್ಪಾಲ್ಕಡಲ್ ನಂಬಿ ಇದ್ದಾರೆ. ಈ ದೇವರ ಪ್ರಸಾದದಿಂದಲೇ ನಮ್ಮಾಳ್ವಾರ್ ಜನಿಸಿದುದು ಎಂಬ ಪ್ರತೀತಿ. ನದಿಯ ಹತ್ತಿರದಲ್ಲಿನ ಬಂಡೆಯೊಂದರ ಮೇಲೆ ಕುಳಿತು ಶ್ರೀ ರಾಮಾನುಜರು ಕಾಲಕ್ಷೇಪ ಮಾಡುತ್ತಿದ್ದರು ಎಂಬ ಪ್ರತೀತಿ.

ಈ ತಿರುಕ್ಕುರುಂಗುಡಿ ಕ್ಷೇತ್ರದಲ್ಲಿಯೇ ತಿರುಮಂಗೈ ಆಳ್ವಾರರು ಪರಮಪದಿಸಿದರು– ಎಂದು ಹೇಳುತ್ತಾರೆ.

ಈ ಕ್ಷೇತ್ರದಿಂದ 6 ಮೈಲಿ ದೂರದಲ್ಲಿನ ಮಹೇಂದ್ರಗಿರಿ ಎಂಬಲ್ಲಿ ಮೆಲೈಮೇಲ್ ನಂಬಿಯ ಸನ್ನಿಧಿ ಇದೆ.

ಈ ದೇವಸ್ಥಾನವು ತುಂಬಾ ದೊಡ್ಡದಾಗಿದ್ದು ಶಿಲ್ಪಕಲೆ ಹಾಗೂ ಕುಂಭಗಳ ಮೇಲಿನ ಕಲಾಕೃತಿಗಳು ತುಂಬಾ ಸುಂದರವಾಗಿವೆ. ಬೃಹದಾಕಾರವಾಗಿ ಎತ್ತರವಾಗಿರುವ ಗೋಪುರವು ಸುಂದರ ಶಿಲ್ಪಗಳಿಂದ ಕೂಡಿದೆ.

ಮೂಲವರ್ : ನಿಂಡ್ರನಂಬಿ, ಕುರುಂಗುಡಿನಂಬಿ, ಇರುಂದನಂಬಿ, ವಡುಗನಂಬಿ, ವೈಷ್ಣವನಂಬಿ, ತಿರುಪ್ಪಾರ್ಕಡಲ್ ನಂಬಿ

**ಉತ್ಸವರ್ : ಅಳಗಿಯ ನಂಬಿ**

**ತಾಯಾರ್ : ಕುರುಂಗುಡುವಲ್ಲಿ**

**ತೀರ್ಥಂ : ತಿರುಪಾರ್ಕಡಲ್, ಪಂಚತೊರೈ, ಸಿಂಧು ನದಿ**

**ವಿಮಾನಂ : ಪಂಚಕೇತಕ ವಿಮಾನಂ**

**ಪ್ರತ್ಯಕ್ಷಗೊಂಡಿರುವುದು : ಶಿವ**

**ಮಂಗಳಶಾಸನ ಮಾಡಿರುವವರು :**

**1. ಪೆರಿಯಾಳ್ವಾರ್, 2. ತಿರುಮಳಿಸಿ ಆಳ್ವಾರ್, 3. ತಿರುಮಂಗೈ ಆಳ್ವಾರ್, 4. ನಮ್ಮಾಳ್ವಾರ್**

# 90. ತಿರುಚೇರಿವರಮಂಗೈ (ವಾಣಮಾಮಲೈ, ನಾಂಗುನೇರಿ)

॥ ಓಂ ಶ್ರೀಶೀರಿವರಮಂಗೈ ಸಮೇತ ಶ್ರೀತೋತಾದ್ರಿನಾಥನ್ ಸ್ವಾಮಿನೇ ನಮಃ ॥

ತಿರುನಲ್ವೇಲಿಗೆ ದಕ್ಷಿಣದಲ್ಲಿ ತಿರುನಲ್ವೇಲಿ ಮತ್ತು ನಾಗರಕೋಯಿಲ್ ರಾಷ್ಟ್ರೀಯ ಹೆದ್ದಾರಿಯಲ್ಲಿ 20 ಮೈಲಿ ದೂರದಲ್ಲಿ ಈ ದಿವ್ಯದೇಶವಿದೆ. ಇದನ್ನು ನಾಂಗುನೇರಿ, ತೋತಾದ್ರಿ, ತಿರುಸಿರಿವರಮಂಗೈ(ಮಂಗಲಂ), ವರಮಂಗಲ ನಹರ್ ಎನ್ನುವ ಹೆಸರುಗಳಿಂದ ಕರೆಯುತ್ತಾರೆ. ಸಾಕಷ್ಟು ದೊಡ್ಡ ಊರಾಗಿದ್ದು, ಎಲ್ಲ ಕಡೆಯಿಂದಲೂ ಬಸ್ ಸೌಕರ್ಯಗಳಿರುವುದರಿಂದ ಎಲ್ಲ ರೀತಿಯ ಅನುಕೂಲಗಳು ಇಲ್ಲಿವೆ.

ಇಲ್ಲಿಗೆ ದಯಮಾಡಿಸಿದ ತಾಯಾರ್‌ರವರಿಂದ ಶ್ರೀವರಮಂಗೈ ಎನ್ನುವ ತಿರುನಾಮವನ್ನು ಈ ದಿವ್ಯದೇಶಕ್ಕೆ ಇಡಲಾಯಿತು. ಭೂಮಿಯಿಂದ ಎತ್ತುವಾಗ ದೇಹದ ಮೇಲೆ ಗಾಯವಾದುದರ ಪರಿಣಾಮವಾಗಿ ಈ ಸನ್ನಿಧಿಯ ದೇವರಿಗೆ ಪ್ರತಿ ದಿನ ಎಣ್ಣೆ ಹಚ್ಚಿ ತಿರುಮಂಜನವನ್ನು ಮಾಡಿಸುವರು. ಈ ದಿವ್ಯದೇಶದಲ್ಲಿ ಭಗವದ್ರಾಮಾನುಜರ ಸಿದ್ಧಾಂತ ಪ್ರವರ್ತಕರಾದ ವಾಣಮಾಮಲೈ ಜೀಯರ್‌ರವರ ಪ್ರಧಾನ ಮಠವಿದೆ. ಇಲ್ಲಿರುವ ತೇನ್‌ಮಾಂಪೊಳಿಲ್ ಎನ್ನುವ ಸುಂದರವನ ಹಾಗೂ ದೇವರ ಸ್ವರ್ಣಗೋಪುರ ನೋಡತಕ್ಕದ್ದಾಗಿದೆ. ಎಂಟು ಸ್ವಯಂಭೂ ಸ್ಥಳಗಳಲ್ಲಿ ಇದೂ ಒಂದು ಎಂದು ಹೇಳಲಾಗುತ್ತದೆ. ಇಲ್ಲಿನ ವಾಣಮಾಮಲೈ ಜೀಯರ ಮಠದವರೇ ದೇವಸ್ಥಾನದ ಆಡಳಿತವನ್ನು ನೋಡಿಕೊಳ್ಳುವರು. ಶ್ರೀಯವರ ಶಠಾರಿಯಲ್ಲಿ ಎಲ್ಲ ಆಳ್ವಾರರ ವಿಗ್ರಹಗಳನ್ನು ಕೆತ್ತಲಾಗಿದೆ. ಪ್ರಧಾನವಾಗಿ ನಮ್ಮಾಳ್ವಾರ್‌ರವರದ್ದು, ಕೇಳಿದರೆ ಅರ್ಚಕರು ತೋರಿಸುತ್ತಾರೆ. ದೇವಸ್ಥಾನವು ತುಂಬಾ ವಿಶಾಲವಾಗಿದೆ.

ಸಿಂಧು ನಾಡಿನ ರಾಜನು ಒಮ್ಮೆ ಬೇಟೆಗೆ ಹೋದಾಗ ಒಂದು ಆನೆಯು ಅಟ್ಟಿಸಿಕೊಂಡು ಬಂದಿತು. ತುಂಬಾ ದೂರ ಓಡಿ ಹೋಗಿ ಆಯಾಸವಾಗಿ ಅಲ್ಲಿ ಕಂಡುಬಂದ ಒಂದು ಗುಡಿಸಲಿನಲ್ಲಿದ್ದ ಆಹಾರವನ್ನು ತಿಂದು ನೀರನ್ನು ಕುಡಿದನು. ಆದರೆ ಆ ಗುಡಿಸಲು ಒಬ್ಬ ಋಷಿಯದಾಗಿತ್ತು. ಆ ಋಷಿಯು ಅರಸನಿಗೆ ದೇವರ ನೈವೇದ್ಯಕ್ಕಿಟ್ಟಿರುವ ಆಹಾರವನ್ನು ತಿಂದಿರುವುದರಿಂದ ಆ

ಆಹಾರವು ಮಾಂಸವಾಗಿ ಕುಡಿದಿರುವ ನೀರು ಮಧುವಾಗಿ ನೀನು ನಾಯಿಯಾಗು ಎಂದು ಶಾಪವನ್ನು ಕೊಟ್ಟನು. ಅರಸನು ತನ್ನ ಪರಿಸ್ಥಿತಿಯನ್ನು ವಿವರಿಸಿ ಶಾಪ ವಿಮೋಚನೆಯ ದಾರಿಯನ್ನು ಕೇಳಲಾಗಿ ಋಷಿಯು ಒಂದು ಪುಣ್ಯ ನದಿಯಲ್ಲಿ ಸ್ನಾನ ಮಾಡಿದರೆ ನಿನಗೆ ಶಾಪ ವಿಮೋಚನೆಯಾಗುವುದೆಂದು ಹೇಳಿದನು. ಆ ಅರಸನು ಈ ವಾಣಮಾಮಲೈ ಕಲ್ಯಾಣಿಯಲ್ಲಿ ಸ್ನಾನ ಮಾಡಿ ತನ್ನ ಹಳೆಯ ರೂಪವನ್ನು ಪಡೆದನು.

ಅಗಸ್ತ್ಯ ಮುನಿಗೆ ಒಮ್ಮೆ ತೀವ್ರವಾದ ಹೊಟ್ಟೆ ನೋವು ಬಂದಾಗ ದೇವರಿಗೆ ಅಭಿಷೇಕ ಮಾಡುವ ಎಣ್ಣೆಯಲ್ಲಿ ಹೊಟ್ಟೆಯನ್ನು ತಿಕ್ಕಿಕೊಂಡಾಗ ನೋವು ನಿವಾರಣೆಯಾಯಿತು. ಈ ಎಣ್ಣೆಗೆ ಸರ್ವರೋಗ ನಿವಾರಣೆ ಎಣ್ಣೆ ಎಂದು ಹೆಸರಿಸಿದರು. ಈಗಲೂ ಇಲ್ಲಿ ಎಣ್ಣೆಯು ಖರೀದಿಗೆ ಸಿಗುತ್ತದೆ.

ಮೂಲವರ್ : ತೋತಾದ್ರಿನಾಥನ್, (ವಾಣಮಾಮಲೈ)
ಉತ್ಸವರ್ : ದೈವನಾಯಕನ್
ತಾಯಾರ್ : ಶೀರಿವರಮಂಗೈ
ತೀರ್ಥಂ : ಇಂದ್ರ ತೀರ್ಥಂ, ತಾಮರೈ ತೀರ್ಥಂ
ವಿಮಾನಂ : ಶ್ರೀ ವೈಕುಂಠ ವಿಮಾನಂ

ಪ್ರತ್ಯಕ್ಷಗೊಂಡಿರುವುದು: ಬ್ರಹ್ಮ, ಇಂದ್ರ, ರೋಮಸ ಮುನಿ, ಬೃಗು ಮುನಿ, ಮಾರ್ಕಂಡೇಯ ಮುನಿ

ಮಂಗಳಶಾಸನ ಮಾಡಿರುವವರು :

1. ನಮ್ಮಾಳ್ವಾರ್



# 91. ತಿರುವೈಕುಂಠಂ (ಶ್ರೀವೈಕುಂಠಂ)

॥ ಓಂ ಶ್ರೀವೈಕುಂಠವಲ್ಲಿ ಸಮೇತ ಶ್ರೀವೈಕುಂಠನಾಥ ಸ್ವಾಮಿನೇ ನಮಃ ॥

ತಿರುನಲ್‌ವೇಲಿ, ತಿರುಚಂದೂರ್ ಬಸ್ ಮಾರ್ಗದಲ್ಲಿ ಈ ಕ್ಷೇತ್ರವಿದೆ. ಆಳ್ವಾರ್ ತಿರುನಗರಿಗೆ ಉತ್ತರದಲ್ಲಿ ತಾಮ್ರಪರ್ಣಿ ದಡದಲ್ಲಿದೆ. ಬಸ್ ಅನುಕೂಲಗಳಿದ್ದು ಛತ್ರಗಳು, ಭೋಜನ ಶಾಲೆಗಳು, ಮತ್ತಿತರ ಎಲ್ಲ ಅನುಕೂಲಗಳಿವೆ. ದೇವಸ್ಥಾನವು ಬಹಳ ದೊಡ್ಡದು. ಉತ್ತಮ ಶಿಲ್ಪಕಲೆಗಳಿಂದ ಕೂಡಿದೆ. ಕೆತ್ತನೆ ಕೆಲಸದ ಕಂಬಗಳಿವೆ.

ಈ ಸ್ಥಳವು ಭೂಲೋಕ ವೈಕುಂಠ. ನವತಿರುಪತಿಯಲ್ಲಿ ಇದು ಸೂರ್ಯಸ್ಥಳ.

ಕಾಲದೋಷಕನ್ ಎಂಬ ಕಳ್ಳನು ಪ್ರತಿದಿನ ದೇವರಿಗೆ ನಮಸ್ಕರಿಸಿ ಕಳ್ಳತನಕ್ಕೆ ಹೋಗುತ್ತಿದ್ದನು. ಬಂದಿದ್ದರಲ್ಲಿ ಅರ್ಧ ಭಾಗವನ್ನು ದೇವರಿಗೆ ಅರ್ಪಿಸುತ್ತಿದ್ದನು. ಒಮ್ಮೆ ಆ ಕಳ್ಳನು ರಾಜನ ಕೈಯಲ್ಲಿ ಸಿಕ್ಕಿಕೊಂಡನು. ಆಗ ಕಳ್ಳನು ದೇವರಲ್ಲಿ ಹೇಗಾದರೂ ತನ್ನನ್ನು ಬಿಡಿಸುವಂತೆ ಬೇಡಿಕೊಂಡನು. ದೇವರು ಕಳ್ಳನ ರೂಪದಲ್ಲಿ ರಾಜನಿಗೆ ದರ್ಶನವಿತ್ತನು. ಆಗ ರಾಜನು ಏನು ದೇವರೇ ನೀನು ಕಳ್ಳನ ರೂಪದಲ್ಲಿ ಬಂದಿದ್ದೀಯೆ ಎಂದು ಕೇಳಲು, ದೇವರು ನೀನು ಧರ್ಮಪಾಲನೆ ಮಾಡುತ್ತಿಲ್ಲ. ಧರ್ಮವನ್ನು ಉದ್ಧಾರ ಮಾಡಲು ನಾನೀ ವೇಷದಲ್ಲಿ ಬಂದಿದ್ದೇನೆ. ನೀನು ಧರ್ಮ ಕಾರ್ಯಗಳನ್ನು ಮಾಡು ಎಂದನು. ಅಂದಿನಿಂದ ರಾಜನು ಧರ್ಮಕಾರ್ಯಗಳನ್ನು ಮಾಡಿದನು.

ಮೂಲವರ್ : ವೈಕುಂಠನಾಥನ್
ಉತ್ಸವರ್ : ಕಳ್ಳಭಿರಾನ್
ತಾಯಾರ್ : ವೈಕುಂಠವಲ್ಲಿ, ಭೂದೇವಿ
ತೀರ್ಥಂ : ಭೃಗು ತೀರ್ಥಂ, ತಾಮ್ರಪರ್ಣಿ ನದಿ
ವಿಮಾನಂ : ಚಂದ್ರ ವಿಮಾನಂ
ಪ್ರತ್ಯಕ್ಷಗೊಂಡಿರುವುದು : ಭೃಗು ಚಕ್ರವರ್ತಿ, ಇಂದ್ರ

ಮಂಗಳಶಾಸನ ಮಾಡಿರುವವರು :

1. ನಮ್ಮಾಳ್ವಾರ್

# 92. ತಿರುವರಗುಣಮಂಗೈ

॥ ಓಂ ಶ್ರೀವರಗುಣವಲ್ಲಿ ಸಮೇತ ಶ್ರೀವಿಜಯಾಸನ ಸ್ವಾಮಿನೇ ನಮಃ ॥

ಶ್ರೀವೈಕುಂಠಕ್ಕೆ ಪೂರ್ವದಲ್ಲಿ ಒಂದು ಮೈಲಿ ದೂರದಲ್ಲಿ ಈ ಕ್ಷೇತ್ರವಿದೆ.

ಈ ಸ್ಥಳವು ನವತಿರುಪತಿಯಲ್ಲಿ ಚಂದ್ರ ಸ್ಥಳ.

ವೇದವಿ ಎನ್ನುವವನು ತಂದೆ, ತಾಯಿ ಗುರು ಅವರಿಗೆ ಸೇವೆ ಮಾಡುತ್ತಿರುವಾಗ ಒಬ್ಬ ಬ್ರಾಹ್ಮಣನು ಬಂದು ಇಲ್ಲಿ ನೀನು ಮಾಡುವುದಕ್ಕಿಂತ ವರಗುಣಮಂತ್ಯೆ ಸ್ಥಳದಲ್ಲಿ ಬಂದು ಸೇವೆ ಮಾಡಲು ಹೇಳಿದನು. ಇಲ್ಲಿ ಸೇವೆ ಮಾಡಿದನಂತರ ಆತ ಸ್ವರ್ಗಸ್ಥನಾದನು.

**ಮೂಲವರ್ : ವಿಜಯಾಸನ ಪೆರುಮಾಳ್**
**ತಾಯಾರ್ : ವರಗುಣವಲ್ಲಿ ತಾಯಾರ್**
**ತೀರ್ಥಂ : ಅಗ್ನಿ ತೀರ್ಥಂ, ದೇವ ಪುಷ್ಕರಣಿ**
**ವಿಮಾನಂ : ವಿಜಯಕೋಟಿ ವಿಮಾನಂ**
**ಪ್ರತ್ಯಕ್ಷಗೊಂಡಿರುವುದು : ಅಗ್ನಿ, ರೋಮನ ಮುನಿ, ಸತ್ಯವಾನ್**

**ಮಂಗಳಶಾಸನ ಮಾಡಿರುವವರು : 1. ನಮ್ಮಾಳ್ವಾರ್**

# 93. ತಿರುಪುಶಂ ಗುಡಿ

॥ ಓಂ ಶ್ರೀಮಲರ್‌ಮಗಳ್ ಸಮೇತ ಶ್ರೀಕಾಯಿಶಿನಿವೇಂದ ಸ್ವಾಮಿನೇ ನಮಃ ॥

ವರಗುಣಮಂಗೈಗೆ ಒಂದು ಮೈಲಿ ದೂರದಲ್ಲಿ ಶ್ರೀ ವೈಕುಂಠ ದೇವಸ್ಥಾನದಿಂದ 2 ಮೈಲಿ ದೂರದಲ್ಲಿ ರಸ್ತೆಗೆ ಎಡಪಾರ್ಶ್ವದಲ್ಲಿ ಈ ಕ್ಷೇತ್ರವಿದೆ.

ನವ ತಿರುಪತಿಯಲ್ಲಿ ಇದು ಬುಧ ಸ್ಥಳ. ಇಲ್ಲಿ ಬ್ರಹ್ಮನು ಸೇವೆ ಮಾಡಿದನು.

**ಮೂಲವರ್ : ಕಾಯಿಶಿನಿವೇಂದನ್**
**ತಾಯಾರ್ : ಮಲರ್‌ಮಗಳ್ ನಾಚ್ಚಿಯಾರ್, ಪೂಮಗಳ್ ನಾಚ್ಚಿಯಾರ್**
**ತೀರ್ಥಂ : ವರುಣ ನಿರುದಿ ತೀರ್ಥಂ**
**ವಿಮಾನಂ : ವೇದಸಾರ**
**ಪ್ರತ್ಯಕ್ಷಗೊಂಡಿರುವುದು : ವರುಣ, ನಿರುದಿ, ಧರ್ಮರಾಜ, ನರ**
**ಮಂಗಳಶಾಸನ ಮಾಡಿರುವವರು : 1. ನಮ್ಮಾಳ್ವಾರ್**

# 94. ತಿರುತೊಲೈವೆಳ್ಳಿ ಮಂಗಲಂ
# ರೆಟ್ಟೈ ತಿರುಪತಿ (ರಾಹು, ಕೇತು)

॥ ಓಂ ಶ್ರೀದೇವಿಭೂದೇವಿ ಸಮೇತ ಶ್ರೀಶ್ರೀನಿವಾಸ ಸ್ವಾಮಿನೇ ನಮಃ ॥

ಆಳ್ವಾರ್ ತಿರುಗನಗರಿಗೆ 2 ಮೈಲಿ ಪೂರ್ವದಲ್ಲಿ ತಾಮ್ರಪರ್ಣಿ ನದಿಗೆ ಉತ್ತರದಲ್ಲಿ ಈ ದಿವ್ಯಕ್ಷೇತ್ರವಿದೆ. ಇಲ್ಲಿ ಎರಡು ಸನ್ನಿಧಿಗಳಿವೆ– ಶ್ರೀನಿವಾಸ ದೇವಸ್ಥಾನ, ಶೆಂದಾಮರೈ ಕಣ್ಣನ್(ಪುಂಡರೀಕಾಕ್ಷ) ದೇವಸ್ಥಾನ. ಇವೆರಡೂ ಸೇರಿ ಒಂದೇ ದಿವ್ಯದೇಶವೆಂದು ಪರಿಗಣಿಸಲಾಗಿದೆ.

ಅತ್ರೇಯ ಮಹರ್ಷಿ ಇಲ್ಲಿ ಯಾಗ ಮಾಡಬೇಕೆಂದು ಭೂಮಿಯಲ್ಲಿ ಗುಂಡಿಗಳನ್ನು ಮಾಡುತ್ತಿರುವಾಗ ಒಂದೆಡೆ ಬಿಲ್ಲು ಮತ್ತೊಂದೆಡೆ ತಕ್ಕಡಿ ಸಿಕ್ಕಿತು. ಆದ್ದಕಾರಣ ಈ ಪ್ರದೇಶವನ್ನು ತೊಲೈ(ತಕ್ಕಡಿ) ವಿಲ್ಲಿ (ಬಿಲ್ಲು) ಮಂಗಲಂ ಎಂದು ಕರೆಯುತ್ತಾರೆ.

ತಕ್ಕಡಿಯು ಶಾಪವಿಮೋಚನೆಯಾಗಿ ಹೆಣ್ಣಾಯಿತು. ಬಿಲ್ಲಿಗೆ ಶಾಪವಿಮೋಚನೆಯಾಗಿ ಪುರುಷನಾದನು. ಇವರಿಬ್ಬರೂ ಕುಬೇರನ ಶಾಪದಿಂದ ಹೀಗಾಗಿದ್ದರು.

ಮೂಲವರ್ : 1. ಶ್ರೀನಿವಾಸನ್ ದೇವಪ್ರಾಶ್ (ರಾಹು)
ತಾಯಾರ್ : ಶ್ರೀದೇವಿ, ಭೂದೇವಿ
ಮೂಲವರ್ : 2. ಅರವಿಂದಲೋಚನ, ಚೆಂದಾಮರೈ ಕಣ್ಣನ್ (ಕೇತು)
ತಾಯಾರ್ : ಕರುಂದಡಕಣ್ಣೆ
ತೀರ್ಥಂ : ವರುಣ ತೀರ್ಥಂ, ತಾಮ್ರಪರ್ಣಿ ನದಿ
ವಿಮಾನಂ : ಕುಮುದ ವಿಮಾನಂ
ಪ್ರತ್ಯಕ್ಷಗೊಂಡಿರುವುದು : ಇಂದ್ರ, ವಾಯು, ವರುಣ

ಮಂಗಳಶಾಸನ ಮಾಡಿರುವವರು :

1. ನಮ್ಮಾಳ್ವಾರ್

# 95. ತಿರುಕುಳಂದ್ಯೆ (ಪೆರುಂಕುಳಂ)

॥ ಓಂ ಶ್ರೀಕುಳಂದ್ಯೆವಲ್ಲಿ ಸಮೇತ ಶ್ರೀಮಾಯಕ್ಕೊತ್ತನ್ ಸ್ವಾಮಿನೇ ನಮಃ ॥

ನವ ತಿರುಪತಿಯಲ್ಲಿ ಇದು ಶನಿ ಸ್ಥಳ

ಅಂಶಾಸಾರ ಎಂಬ ರಾಕ್ಷಸನನ್ನು ಮಾಯೆಯಿಂದ ಭಗವಂತನು ಕೊಂದನು. ಆ ಕಾರಣ ಈ ದೇವರಿಗೆ ಮಾಯಕ್ಕೊತ್ತನ್ ಎಂಬ ಹೆಸರು ಬಂದಿತು.

ಮೂಲವರ್ : ಶ್ರೀನಿವಾಸನ್
ಉತ್ಸವರ್ : ಮಾಯಕ್ಕೊತ್ತನ್
ತಾಯಾರ್ : ಅಲಮೇಲುಮಂಗೈ, ಕುಳಂದ್ಯೆವಲ್ಲಿ
ತೀರ್ಥಂ : ಪೆರುಂಕುಳಂ
ವಿಮಾನಂ : ಆನಂದನಿಲಯ ವಿಮಾನಂ
ಪ್ರತ್ಯಕ್ಷಗೊಂಡಿರುವುದು : ಬೃಹಸ್ಪತಿ
ಮಂಗಳಶಾಸನ ಮಾಡಿರುವವರು : 1. ನಮ್ಮಾಳ್ವಾರ್



# 96. ತಿರುಕ್ಕೋಲೂರ್

॥ ಓಂ ಶ್ರೀಕೋಲೂರ್‌ವಲ್ಲಿ ಸಮೇತ ಶ್ರೀವೈತ್ತಮಾನಿಧಿ ಸ್ವಾಮಿನೇ ನಮಃ ॥

ನವತಿರುಪತಿಯಲ್ಲಿ ಇದು ಮಂಗಳ ಗ್ರಹ. ಮಧುರ ಕವಿ ಆಳ್ವಾರರ ಜನ್ಮಸ್ಥಳವೂ ಸಹ ಆಗಿದೆ.

ಒಮ್ಮೆ ಕುಬೇರನು ಕೈಲಾಸಕ್ಕೆ ತೆರಳಿ ಅಲ್ಲಿ ಪಾರ್ವತಿಯನ್ನು ಕೆಟ್ಟ ದೃಷ್ಟಿಯಿಂದ ನೋಡುತ್ತಾನೆ. ಅದನ್ನು ಕಂಡ ಪಾರ್ವತಿಯು ಕುಬೇರನಿಗೆ ನಿನ್ನ ಅಹಂಕಾರಕ್ಕೆ ನಿನ್ನ ನವ ನಿಧಿಗಳೂ ಮಾಯವಾಗಲಿ ಎಂದು ಶಾಪವನ್ನಿತ್ತಳು. ಪಶ್ಚಾತಾಪಗೊಂಡ ಕುಬೇರನು ಶಿವನನ್ನು ತನ್ನ ನವ ನಿಧಿಗಳೂ ದೊರಕಲಿ ಎಂದು ಪ್ರಾರ್ಥಿಸಿಕೊಂಡಾಗ ಶಿವನು ತಿರುಕ್ಕೋಳೂರಿಗೆ ಹೋಗಿ ಅಲ್ಲಿ ಭಗವಂತನನ್ನು ಧ್ಯಾನಿಸು. ನಿನ್ನ ಶಾಪವಿಮೋಚನೆಯಾಗುತ್ತದೆ ಎಂದನು. ಅಂತೆಯೇ ಕುಬೇರನು ಈ ಸ್ಥಳಕ್ಕೆ ಬಂದು ಭಗವಂತನನ್ನು ಧ್ಯಾನಿಸುತ್ತಾನೆ. ಸಂಪ್ರೀತಗೊಂಡ ನಾರಾಯಣನು ತನ್ನ ಎಡಗೈ ಯಂತ್ರದಲ್ಲಿ ನೋಡಿ ನವನಿಧಿಗಳೂ ತನ್ನ ಪಾದಾರವಿಂದದಲ್ಲಿದೆ ಎಂದು ಹೇಳಿ ಕುಬೇರನ ಭಕ್ತಿಗೆ ಮೆಚ್ಚಿ ನಾರಾಯಣನು ಜನರಿಗೆ ಅಳತೆ ಮಾಡಿ ಸಂಪತ್ತು ಕೊಡುವಾಗ ಕೆಳಗೆ ಚೆಲ್ಲಿದ ಸಂಪತ್ತನ್ನು ನೀನು ತೆಗೆದುಕೋ ಎಂದು ಕುಬೇರನಿಗೆ ಹೇಳುತ್ತಾರೆ. ಚೆಲ್ಲಿದ ಸಂಪತ್ತನ್ನು ತೆಗೆದುಕೊಂಡೇ ಕುಬೇರನು ದೊಡ್ಡವನಾಗಿರುವಾಗ ಜನರಿಗೆ ಅಳತೆ ಮಾಡಿ ಕೊಡುವ ಸಂಪತ್ತು ಇನ್ನೆಷ್ಟಿರುತ್ತದೆ. ನಾವು ಈ ದೇವರ ದರ್ಶನ ಮಾಡಿದರೆ ನಮಗೆ ಸಕಲೈಶ್ವರ್ಯಗಳೂ ದೊರಕುತ್ತದೆ.

**ಮೂಲವರ್ : ವೈತ್ತಮಾನಿಧಿ, ಭುಜಂಗ ಶಯನ**
**ತಾಯಾರ್ : ಕುಮುದವಲ್ಲಿ, ಕೋಲೂರ್‌ವಲ್ಲಿ**
**ತೀರ್ಥಂ : ಕುಬೇರ ತೀರ್ಥಂ, ತಾಮರಪರ್ಣಿ**
**ವಿಮಾನಂ : ಶ್ರೀಕರ ವಿಮಾನಂ**
**ಪ್ರತ್ಯಕ್ಷಗೊಂಡಿರುವುದು : ಕುಬೇರನ್, ಮಧುರ ಕವಿ ಆಳ್ವಾರ್**

**ಮಂಗಳಶಾಸನ ಮಾಡಿರುವವರು :**

**1. ನಮ್ಮಾಳ್ವಾರ್**

# ೯7. ತಿರುಪೇರ್ರೈ (ತೆನ್‌ತಿರುಪೇರ್ರೈ)

॥ ಓಂ ಶ್ರೀಕುಳೈಕಾದುವಲ್ಲಿ ಸಮೇತ ಶ್ರೀಮಕರನೆಡುಂಕುಡೈಕಾದರ್‌ಸ್ವಾಮಿನೇ ನಮಃ ॥

ನವತಿರುಪತಿಯಲ್ಲಿ ಇದು ಶುಕ್ರ ಸ್ಥಳ.

ಈ ದೇವರಿಗೆ ಮೀನಿನ ರೀತಿ ಕಿವಿ ಉದ್ದವಾಗಿರುತ್ತದೆ. ಆದ್ದರಿಂದ ಈ ದೇವರನ್ನು 'ಮಕರನಿಡುಂಕುಳೈಕಾದರ್' ಎಂದು ಕರೆಯುತ್ತಾರೆ. ದೇವಿಗೆ ಮಕರನಿಡುಂಕುಳೈಕಾದು ನಾಚ್ಚಿಯಾರ್ ಎನ್ನುತ್ತಾರೆ.

ಈ ದೇಗುಲದಲ್ಲಿ ಗರುಡನು ಪಕ್ಕಕ್ಕಿರುತ್ತಾನೆ. ಈ ರೀತಿ ಪ್ರಪಂಚದಲ್ಲಿ ಎಲ್ಲಿಯೂ ಇಲ್ಲ. ಎಲ್ಲ ಕಡೆಯೂ ದೇವರಿಗೆ ಎದುರಾಗಿಯೇ ಗರುಡನು ಇರುತ್ತಾನೆ. ದೇವರು ಬರುವ ಭಕ್ತರನ್ನು ಬನ್ನಿರೆಂದು ಕರೆಯುತ್ತಾ ಕ್ಷೇಮಸಮಾಚಾರವನ್ನು ವಿಚಾರಿಸುತ್ತಾ ಸಕಲೈಶ್ವರ್ಯ ಆರೋಗ್ಯ ನೆಮ್ಮದಿಯನ್ನು ಕೊಡುತ್ತಾನೆ. ಈ ದೇವರಿಗೆ ನಿಗರಿಲ್‌ಮುಗಿಲ್‌ವಣ್ಣನ್ ಎಂದು ಕರೆಯುತ್ತಾರೆ. ನಿಗರಿಲ್ – ಪ್ರಪಂಚದಲ್ಲಿ, ಮುಗಿಲ್ ವಣ್ಣನ್ – ಇವರ ರೀತಿ ಬೇರಾರೂ ಇಲ್ಲ.

ಮೂಲವರ್ : ಮಕರನಿಡುಂಕುಳೈಕಾದರ್, ನಿಗರಿಲ್‌ಮುಗಿಲ್‌ವಣ್ಣನ್
ತಾಯಾರ್ : ಕುಳೈಕಾದುವಲ್ಲಿ ನಾಚ್ಚಿಯಾರ್, ತಿರುಪೇರ್ರೈ ನಾಚ್ಚಿಯಾರ್
ತೀರ್ಥಂ : ಶುಕ್ರ ಪುಷ್ಕರಣಿ, ಶಂಖ ತೀರ್ಥಂ
ವಿಮಾನಂ : ಪತ್ರ ವಿಮಾನಂ
ಪ್ರತ್ಯಕ್ಷಗೊಂಡಿರುವುದು : ಶುಕ್ರ, ಬ್ರಹ್ಮ, ಈಶಾನ್ಯ ರುದ್ರ

ಮಂಗಳಶಾಸನ ಮಾಡಿರುವವರು :

1. ನಮ್ಮಾಳ್ವಾರ್



# 98. ತಿರುಕ್ಕುರುಗೂರ್ (ಆಳ್ವಾರ್ ತಿರುನಗರಿ)

॥ ಓಂ ಶ್ರೀಆದಿನಾಥವಲ್ಲಿ ಸಮೇತ ಶ್ರೀಆದಿನಾಥನ್ ಸ್ವಾಮಿನೇ ನಮಃ ॥

ತಿರುನಲ್ವೇಲಿ –ತಿರುಚ್ಚೆಂದೂರ್‌ಗಳ ನಡುವೆ ಇರುವ ದಿವ್ಯಕ್ಷೇತ್ರವಿದು. ಈ ಕ್ಷೇತ್ರದ ಹಿಂದೆ ತಾಮ್ರಪರ್ಣಿ ನದಿಯ ಕಾಲುವೆ ಇದೆ. ಈ ಕ್ಷೇತ್ರವನ್ನು ತಿರುಕ್ಕುರುಹೂರ್, ಎಂದೂ ಕರೆಯುತ್ತಾರೆ.

ಇದು ನಮ್ಮಾಳ್ವಾರ್‌ರವರು ಜನಿಸಿದ ಸ್ಥಳ. ಅವರು ಜನಿಸಿದ ಅಪ್ಪನ್ ಕೋಯಿಲ್ ಪಕ್ಕದಲ್ಲೇ ಇದೆ. ಅದರಿಂದ ಶ್ರೀವೈಷ್ಣವರಿಗೆ ಪವಿತ್ರ ಹಾಗೂ ಮಹತ್ವವಾದ ಕ್ಷೇತ್ರ. ಶ್ರೀನಮ್ಮಾಳ್ವಾರ್‌ರವರು ಕುಳಿತು ತಪಸ್ಸು ಮಾಡಿದ ಹುಣಿಸೇಮರವು ಈಗಲೂ ಇದ್ದು, ಬೃಹತ್ ವೃಕ್ಷವಾಗಿದೆ. ಇದರ ಕೆಳಗೆ ನಮ್ಮಾಳ್ವಾರ್‌ರವರ ಸನ್ನಿಧಿ ಇದ್ದು, ಅದರಲ್ಲಿ ತಿರುಪ್ಪುಳಿಯಾಳ್ವಾರ್ ಆಗಿರುವ ನಮ್ಮಾಳ್ವಾರ್‌ರವರ ಬೃಹತ್ ಚಿತ್ರವಿದೆ. ಇದೇ ಸ್ಥಳದಲ್ಲಿಯೇ ಶ್ರೀನಾಥಮುನಿಗಳು ನಮ್ಮಾಳ್ವಾರ್‌ರವರನ್ನು ಸಾಕ್ಷಾತ್ಕರಿಸಿಕೊಂಡು ನಾಲಾಯಿರ ದಿವ್ಯ ಪ್ರಬಂಧಗಳನ್ನು ಅಧಿಕರಿಸಿಕೊಂಡರು. ಈ ದೇವಸ್ಥಾನವು ಬಹಳ ದೊಡ್ಡದಾಗಿದೆ. ನಮ್ಮಾಳ್ವಾರರಿಗೆ ವಿಶೇಷ ಉತ್ಸವಗಳು ನಡೆಯುತ್ತವೆ.

ನಮ್ಮಾಳ್ವಾರ್ ಅವರು ಹುಟ್ಟಿದಾಗ ಕಿವಿ ಕೇಳಿಸದೆ, ಕಣ್ಣು ಕಾಣಿಸದೆ, ಮಾತನಾಡಲಾಗದೆ, ನಡೆಯಲಾಗದೆ ಜಡವಸ್ತುವಿನಂತೆ ಇದ್ದರು. ಆಗ ಇವರ ತಂದೆತಾಯಂದಿರು ದೇವರ ಬಳಿ ಈ ಮಗುವನ್ನು ನೀನೇ ಕೊಟ್ಟಿರುವೆ. ನೀನೇ ಕಾಪಾಡಬೇಕೆಂದು ಬೇಡಿಕೊಂಡಾಗ ಆ ಮಗುವು ಹತ್ತಿರದಲ್ಲಿದ್ದ ಹುಣಸೇ ಮರದಲ್ಲಿ ಹೋಗಿ ಅವಿತುಕೊಂಡಿತು. ಈ ಹುಣಿಸೇಮರವು ಹಣ್ಣುಗಳನ್ನು ಬಿಡುವುದಿಲ್ಲ. ಅದರ ಎಲೆಗಳು ಇತರೇ ಹುಣಸೇಮರಗಳಂತೆ ಮುದುರಿಕೊಳ್ಳುವುದಿಲ್ಲ. ಅದರ ಬೇರು ಎಲ್ಲಿದೆಯೋ ಯಾರಿಗೂ ತಿಳಿಯದು. ಇದು ಮನೋವೃತ್ತಿಯಿಂದ ಇಲ್ಲಿನ ಒಂದು ವಿಚಿತ್ರವೇ ಸರಿ. ಈಗ ಈ ಮರಕ್ಕೆ 5025 ವರ್ಷವಾಗಿದೆ.

ಮಧುರ ಕವಿ ಆಳ್ವಾರ್ ಕಾಶಿಯಲ್ಲಿ ತಪಸ್ಸು ಮಾಡುತ್ತಿದ್ದಾಗ ಒಂದು ಜ್ಯೋತಿಯೊಂದು ಪ್ರತ್ಯಕ್ಷವಾಯಿತು. ಆ ಜ್ಯೋತಿಯು ಮುಂದೆ ಮುಂದೆ

ಹೋಗುತ್ತಿದ್ದಾಗ ಮಧುರಕವಿ ಆಳ್ವಾರರು ಅದನ್ನು ಹಿಂಬಾಲಿಸಿದರು. ಜ್ಯೋತಿಯು ಈ ಸ್ಥಳಕ್ಕೆ ಬಂದು ಹುಣಸೇ ಮರದಲ್ಲಿ ಮಾಯವಾಯಿತು. ಅದನ್ನು ಕಂಡ ಮಧುರ ಕವಿ ಆಳ್ವಾರರು ಧ್ಯಾನಿಸಿ ಆ ಮರದೊಳಗೆ ಏನೋ ಇರಬೇಕೆಂದು ತಿಳಿದಾಗ ಈ ನಮ್ಮಾಳ್ವಾರ್ ದರ್ಶನ ಕೊಟ್ಟು ಹೊರಗೆ ಬಂದರು. ಅವರೇ ನಮ್ಮಾಳ್ವಾರ್. ಮಧುರಕವಿ ಆಳ್ವಾರರು ನಮ್ಮಾಳ್ವಾರರನ್ನು ಕಂಡ ಕೂಡಲೇ ಇವರೇ ನಮ್ಮ ಗುರುಗಳೆಂದು ಭಾವಿಸಿ ಅವರ ಬಳಿ ಶರಣಾಗತಿಯಾದರು.

350 ವರ್ಷಗಳ ಹಿಂದೆ ರಾಜರು ಈ ದೇವಾಲಯಕ್ಕೆ ಅರ್ಪಿಸಿದ ಶಿಲೆಯೊಂದರಲ್ಲಿ ಎಲ್ಲ ವಿಧವಾದ ವಾದ್ಯಶಬ್ದಗಳನ್ನು ನುಡಿಸಬಹುದು. ಇದನ್ನು 'ಮೊಗವೀಣೆ' ಎಂದು ಕರೆಯುತ್ತಾರೆ. ನಾದವನ್ನು ಹೊರ ಚೆಲ್ಲುವ ಕಂಬಗಳು ಈ ದೇವಾಲಯದಲ್ಲಿ ಸಾಕಷ್ಟಿವೆ.

ಈ ಸುತ್ತಮುತ್ತಲಿನಲ್ಲಿ ನವ ತಿರುಪತಿ ಎನ್ನುವ ಒಂಬತ್ತು ವಿಷ್ಣು ದೇವಾಲಯಗಳಿವೆ.

ಮೂಲವರ್ : ಆದಿನಾಥನ್

ತಾಯಾರ್ : ಆದಿನಾಥವಲ್ಲಿ, ಕುರುಕೂರ್‌ವಲ್ಲಿ

ತೀರ್ಥಂ : ಬ್ರಹ್ಮ ತೀರ್ಥಂ, ತಾಮ್ರಪರ್ಣಿ ನದಿ

ಸ್ಥಳ ವೃಕ್ಷಂ : ಹುಣಸೇ ಮರ

ವಿಮಾನಂ : ಗೋವಿಂದ ವಿಮಾನ

ಪ್ರತ್ಯಕ್ಷಗೊಂಡಿರುವುದು : ಬ್ರಹ್ಮ, ಮಧುರಕವಿ ಆಳ್ವಾರ್, ನಮ್ಮಾಳ್ವಾರ್

ಮಂಗಳಶಾಸನ ಮಾಡಿರುವವರು :

1. ನಮ್ಮಾಳ್ವಾರ್





# 99. ತಿರುವಳ್ಳಿಪುತ್ತೂರ್ ( ಶ್ರೀವಿಲ್ಲಿಪುತ್ತೂರ್ )

॥ ಓಂ ಶ್ರೀಆಂಡಾಳ್ ಸಮೇತ ಶ್ರೀವಟಪತ್ರಸಾಯಿ ಸ್ವಾಮಿನೇ ನಮಃ ॥

ವಿರುದುನಗರ – ತೇನ್‌ಕಾಶಿಗಳ ನಡುವೆ ಇರುವ ಒಂದು ರೈಲ್ವೆ ನಿಲ್ದಾಣವಿದು. ಇಲ್ಲಿಂದ ಪಶ್ಚಿಮಕ್ಕೆ ಒಂದು ಮೈಲಿ ದೂರದಲ್ಲಿ ಈ ಕ್ಷೇತ್ರ ಹಾಗೂ ಇದರ ಪ್ರಖ್ಯಾತ ದೇವಾಲಯವಿದೆ. ಮಧುರೈ ಮತ್ತಿತರ ಕಡೆಗಳಿಂದ ಸೌಕರ್ಯ ಚೆನ್ನಾಗಿದೆ. ದೊಡ್ಡ ಊರಾಗಿದ್ದು, ಎಲ್ಲ ಅನುಕೂಲಗಳೂ ಇವೆ. ಒಂದು ಅಹೋಬಲ ಮಠವಿದೆ.

ಶ್ರೀದೇವಿ, ಭೂದೇವಿ ಇವರಿಬ್ಬರೂ ಭಕ್ತರಾದ ಬೇಡರಾಜ ವಿಲ್ಲನ್ ಮತ್ತು ಪುತ್ತನ್ ಸೇರಿ ಶ್ರೀವಿಲ್ಲಿಪುತ್ತನ್ ಎಂಬ ಹೆಸರು ಬಂದಿತು. ಈಗ ಶ್ರೀವಿಲ್ಲಿಪುತ್ತೂರ್ ಎಂಬ ಹೆಸರಾಗಿದೆ. ಇಲ್ಲಿ ಎರಡು ದೇವಾಲಯಗಳಿದ್ದು- ಒಂದರಲ್ಲಿ ವಟಪತ್ರಶಾಯಿಯೂ, ಮತ್ತೊಂದರಲ್ಲಿ ರಂಗಮನ್ನಾರ್ ದೇವರು ವಿರಾಜಮಾನರಾಗಿದ್ದಾರೆ. ಮೊದಲನೆಯದನ್ನು ಪೆರಿಯ ಕೋಯಿಲ್ ಎಂದೂ, ಎರಡನೆಯದನ್ನು ಆಂಡಾಳ್ ಸನ್ನಿಧಿಯೆಂದೂ ಕರೆಯುತ್ತಾರೆ.

ಆಂಡಾಳ್ ಮತ್ತು ಪೆರಿಯಾಳ್ವಾರ್‌ರವರುಗಳ ಅವತಾರ ಸ್ಥಳವಿದಾದುದರಿಂದ ಶ್ರೀವೈಷ್ಣವ ಸಮುದಾಯದಲ್ಲಿ ಇದು ಅತ್ಯಂತ ಖ್ಯಾತಿ ಪಡೆದಿದೆ. ಇವರಿಬ್ಬರೂ ತಮ್ಮ ಜೀವಮಾನವನ್ನೆಲ್ಲ ಕಳೆದು, ಸಾಹಿತ್ಯ ಸೃಷ್ಟಿ ಮಾಡಿದ, ಭಗವಂತನ ಸಾಕ್ಷಾತ್ಕಾರವನ್ನು ಪಡೆದ ಸ್ಥಳವಿದು. ಆದರಿಂದಲೇ ಇದು ಪ್ರಖ್ಯಾತಿ.

ಆಂಡಾಳ್‌ರವರಿಗೆ ಬಹಳ ವೈಭವದ, ನಯನ ಮಹೋಹರ ಉತ್ಸವಗಳು ವಿಜೃಂಭಣೆಯಿಂದ ನಡೆಯುತ್ತವೆ.

ಮುಖ್ಯ ದೇವಾಲಯಕ್ಕೆ ದಕ್ಷಿಣದಲ್ಲಿ ತುಳಸೀವನದ ಮುಂದೆ ಪೆರಿಯಾಳ್ವಾರ್ ಸನ್ನಿಧಿ ಇದೆ. ಇಲ್ಲಿಯ ರಥ ಬೃಹದಾಕಾರವಾಗಿ,ಸುಂದರವಾಗಿದೆ.

ಮಾರ್ಗಳಿ ಮಾಸದಲ್ಲಿ ಒಂದು ತಿಂಗಳ ಪೂರ್ತಿ ಉತ್ಸವಗಳು ನಡೆಯುತ್ತವೆ. ಆಂಡಾಳ್ ದೇವಿಯ ನೀರಾಟ ಉತ್ಸವಗಳು ನಡೆಯುತ್ತವೆ. ಆಂಡಾಳ್ ದೇವಿಯ ನೀರಾಟ ಉತ್ಸವ ಮತ್ತು ಪಂಗುನಿ ಮಾಸಲ್ಲಿ ಆಂಡಾಳ್ ನಡೆಯುವ ತಿರುಕ್ಕಲ್ಯಾಣ ಮಹೋತ್ಸವಗಳು ನೋಡಲು ರಮ್ಯವಾಗಿವೆ. ಅಡಿ ಉತ್ಸವಗಳಲ್ಲಿ ಐದನೆಯ

ದಿನ ಉದಯದಲ್ಲಿ ರಂಗಮನ್ನಾರ್, ವಟಪತ್ರಶಾಯಿ, ತಿರುತ್ತಂಗಾಲಪ್ಪನ್, ಪೆರಿಯಾಳ್ವಾರ್‌ರವರು ಎದುರುಗೊಂಡು ಮಂಗಳಾಶಾಸನ ಮಾಡುವ ಮಹೋತ್ಸವವೂ, ಅಂದು ರಾತ್ರಿ ಹಂಸವಾಹನದೊಂದಿಗೆ ಆಂಡಾಳ್ ಎದುರುಗೊಂಡ ನಂತರ ಅವರೊಂದಿಗೆ ತೀರುವೀದಿಗಳಲ್ಲಿ ದಯಮಾಡಿಸುವ ಮಹೋತ್ಸವವೂ ಕಣ್ಣಿಗೆ ಹಬ್ಬವಾಗಿದ್ದು ನೋಡಿ ಸವಿಯುವವರಿಗೆ ಆಹ್ಲಾದವನ್ನು ಉಂಟು ಮಾಡುತ್ತದೆ. ತಮಿಳುನಾಡಿನ ಚಿಹ್ನೆಯಾಗಿ ಈ ಗೋಪುರವಿದೆ.

ಮೂಲವರ್ : ವಟಪತ್ರಸಾಯಿ, ರಂಗಮನ್ನಾರ್
ತಾಯಾರ್ : ಆಂಡಾಳ್ (ಗೋದಾ ನಾಚ್ಚಿಯಾರ್)
ತೀರ್ಥಂ : ತಿರುಮುಕ್ಕುಲಂ
ವಿಮಾನಂ : ಸಂಸನ ವಿಮಾನಂ
ಪ್ರತ್ಯಕ್ಷಗೊಂಡಿರುವುದು : ಮಂಡೂಕ ಮಹಷಿ, ಪೆರಿಯಾಳ್ವಾರ್

ಮಂಗಳಶಾಸನ ಮಾಡಿರುವವರು :
1. ಪೆರಿಯಾಳ್ವಾರ್, 2. ಆಂಡಾಳ್



# 100. ತಿರುತಂಗಾಲ್

॥ ಓಂ ಶ್ರೀಅಣ್ಣನಾಯಕಿ ಸಮೇತ ಶ್ರೀನಿಂಡ್ರನಾರಾಯಣನ್ ಸ್ವಾಮಿನೇ ನಮಃ ॥

ಇದನ್ನು ತಿರುತ್ತಂಗಲ್, ತಿರುತ್ತನ್‌ಕಾಲೂರ್ ಎನ್ನುವ ಹೆಸರುಗಳಿಂದಲೂ ಕರೆಯುತ್ತಾರೆ.

ಮಧುರೈನಿಂದ ಶಿವಕಾಶಿಗೆ ಹೋಗುವ ಮಾರ್ಗದಲ್ಲಿ, ಶಿವಕಾಶಿ ಸ್ಟೇಷನ್ನಿನಿಂದ ಉತ್ತರದಲ್ಲಿ ಎರಡು ಮೈಲಿ ದೂರದಲ್ಲಿ ಈ ಕ್ಷೇತ್ರವಿದೆ.

ಶ್ರೀಕೃಷ್ಣನು ಬಾಣಾಸುರನನ್ನು ಜಯಿಸಿ, ಅನಿರುದ್ಧನಿಗೂ ಉಷೆಗೂ ಮದುವೆ ಮಾಡಿಸಿದ ಸ್ಥಳವಿದು. ಇಲ್ಲಿರುವ ಪೆರಿಯ ತಿರುವಡಿ(ಗರುಡಾಳ್ವಾರ್) ಅಂಜಲೀಬದ್ಧನಾಗಿ ಸರ್ಪ ಮತ್ತು ಅಮೃತ ಕಳಸದೊಂದಿಗೆ ಕೂಡಿದ ಎರಡೂ ಹಸ್ತಗಳು ಇರುವಿಕೆಯು ನೋಡುವವರಿಗೆ ವಿಸ್ಮಯವನ್ನು ಉಂಟು ಮಾಡುತ್ತದೆ.

ವೈಕುಂಠದಿಂದ ಮಹಾಲಕ್ಷ್ಮಿಯು ತುಂಬಾ ಇಷ್ಟದಿಂದ ಈ ಸ್ಥಳದಲ್ಲಿ ಬಂದು ನೆಲಸಿದಳು. ಆದ್ದರಿಂದ ಈ ಊರಿಗೆ ತಿರು + ತಂಗಾಲ್ = ತಿರು (ಲಕ್ಷ್ಮಿ) ತಂಗಾಲ್ (ಇಲ್ಲಿ ನೆಲೆಸಿರುವುದು) ಎಂಬ ಹೆಸರಾಯಿತು. ಇಲ್ಲಿನ ದೇವರು ಬಹಳ ದೊಡ್ಡದಾಗಿಯೂ ಆನಂದವಾಗಿಯೂ ಬಹಳ ಅಮೋಘವಾಗಿಯೂ ಇದ್ದಾರೆ. ಈ ರೀತಿಯ ಭವ್ಯ ಮೂರ್ತಿ ಪ್ರಪಂಚದಲ್ಲಿ ಬೇರೆಲ್ಲಿಯೂ ಇಲ್ಲ. ಶಿವಕಾಶಿಯ ಹತ್ತಿರ ಈ ಕ್ಷೇತ್ರದಲ್ಲಿರುವುದರಿಂದ ಇಲ್ಲಿ ಪಟಾಕಿ ಬಹಳ ವಿಶೇಷ. ಪಟಾಕಿಯ ಮೇಲೆ ಲಕ್ಷ್ಮೀ ಭಾವಚಿತ್ರವಿರುವುದು ಈ ಊರಿನಿಂದ ಬಂದಿರುವುದು.

ಈ ದೇವಾಲಯವು ಸಣ್ಣ ಗುಡ್ಡದ ಮೇಲಿದೆ. ದಕ್ಷಿಣದ ಕಡೆಯಿಂದ ಮೆಟ್ಟಿಲುಗಳನ್ನು ಹತ್ತಿ ಹೋದರೆ ಮೊದಲು ಜಾಂಬವತಿಯ ದರ್ಶನವಾಗುತ್ತದೆ. ಆ ನಂತರದ್ದು ಪೆರುಮಾಳ್ ಸನ್ನಿಧಿ. ಇಲ್ಲಿನ ದೇವರು ಮಣ್ಣಿನಲ್ಲಿ ಮಾಡಿದ ರಂಗು ರಂಗಾದ ಮೂರ್ತಿಗಳಾಗಿದ್ದು ಇದಕ್ಕೆ ಅಭಿಷೇಕವಿಲ್ಲ. ಇಲ್ಲಿನ ದೇವರನ್ನು ನೋಡಿದರೆ ನವರಾತ್ರಿಯ ಬೊಂಬೆ ಪ್ರದರ್ಶನದಂತಿರುತ್ತದೆ.

**ಮೂಲವರ್ : ನಿಂಡ್ರ ನಾರಾಯಣನ್**

**ಉತ್ಸವರ್ : ತಿರುತಂಗಾಲಪ್ಪನ್**

**ತಾಯಾರ್ : ಚೆಂಗಮಲ ತಾಯಾರ್, ಅಣ್ಣ ನಾಯಕಿ, ಅನಂತನಾಯಕಿ, ಅಮೃತನಾಯಕಿ, ಜಾಂಬವತಿ**

**ತೀರ್ಥಂ : ಪಾಪವಿನಾಶ ತೀರ್ಥಂ**

**ವಿಮಾನಂ : ದೇವಚಂದ್ರ ವಿಮಾನಂ**

**ಪ್ರತ್ಯಕ್ಷಗೊಂಡಿರುವುದು: ಶಲ್ಯಪಾಂಡ್ಯನ್, ಶ್ರೀವಲ್ಲವನ್, ಶ್ರೀದೇವಿ**

**ಮಂಗಳಶಾಸನ ಮಾಡಿರುವವರು :**

**1. ತಿರುಮಂಗೈಆಳ್ವಾರ್, 2. ಬೂತತ್ತಾಳ್ವಾರ್**

# 101. ತಿರುಕ್ಕೂಡಲ್

॥ ಓಂ ಶ್ರೀವಹುಳವಲ್ಲಿ ಸಮೇತ ಶ್ರೀಕೂಡಲಳಗರ್ ಸ್ವಾಮಿನೇ ನಮಃ ॥

ಇದು ಮಧುರೈ ನಗರದಲ್ಲಿದೆ. ರೈಲ್ವೆ ನಿಲ್ದಾಣದ ಹತ್ತಿರದಲ್ಲಿದೆ. ಇದು ತುಂಬಾ ದೊಡ್ಡದಾದ ದೇವಸ್ಥಾನ. ಈ ದೇವಾಲಯವು ಮಧುರೈ ಮೀನಾಕ್ಷಿ ದೇವಾಲಯದ ರೀತಿ ಇದೆ. ಇಲ್ಲಿಯೇ ಪೆರಿಯಾಳ್ವಾರ್‌ರವರು 'ಪಲ್ಲಾಂಡು ಪಲ್ಲಾಂಡು' ಎಂದು ಭಗವಂತನಿಗೆ ಮಂಗಳಾಶಾಸನ ಮಾಡಿದುದು.

ಈ ದೇವಸ್ಥಾನದಲ್ಲಿ ಅಪೂರ್ವವಾದ ನವಗ್ರಹ ಸನ್ನಿಧಿ ಇದೆ. ಸನ್ನಿಧಿಯ ಮೇಲ್ಭಾಗದಲ್ಲಿ ಎರಡು ಅಂತಸ್ತುಗಳಿದ್ದು ಒಂದರಲ್ಲಿ ನಿಂತಿರುವ ಸೂರ್ಯ ನಾರಾಯಣನ ಸನ್ನಿಧಿ ಇವೆ. ಬೆಳಗಿನ ಪೂಜೆ ಇವರಿಗೂ ನಡೆಯುತ್ತದೆ.

ಒಮ್ಮೆ ಈ ಸ್ಥಳದಲ್ಲಿ ತುಂಬಾ ಮಳೆಯಾಗುತ್ತಿದ್ದಾಗ ದೇವಾದಿ ದೇವತೆಗಳು ನಾರಾಯಣನನ್ನು ಮಳೆ ನಿಲ್ಲಿಸೆಂದು ಬೇಡಿಕೊಂಡರು. ಆಗ ದೇವರು ಮಳೆ ಬೀಳದಿರಲು ಎಲ್ಲಾ ಮೇಘಗಳನ್ನೂ ಒಟ್ಟಿಗೆ ಸೇರಿಸಿ (ಕೂಡಿಸಿ) ಮಳೆಯನ್ನು ನಿಲ್ಲಿಸಿದನು. ಆದ್ದರಿಂದ ಈ ಸ್ಥಳವನ್ನು ತಿರುಕ್ಕೂಡಲ್ ಎಂದು ಕರೆಯುತ್ತಾರೆ. ಇಲ್ಲಿನ ದೇವರು ಬಹು ಸುಂದರವಾಗಿ ಕಾಣುತ್ತದೆ. ತಾಯಾರ್ ಸನ್ನಿಧಿಯೂ ಪ್ರತ್ಯೇಕವಾಗಿ ಬಹಳ ದೊಡ್ಡದಾಗಿದೆ. ಈ ದೇಗುಲದ ಸುತ್ತಲೂ 108 ದಿವ್ಯ ದೇಶದ ದೇವರ ಚಿತ್ರಗಳನ್ನು ಬರೆದಿದ್ದಾರೆ.

ಮೂಲವರ್ : ಕೂಡಲಳಗರ್ (ಸುಂದರವಾದ ಮೂರ್ತಿ)

ತಾಯಾರ್ : ಮಧುರವಲ್ಲಿ, ವಹುಳವಲ್ಲಿ, ವರಗುಣವಲ್ಲಿ, ಮರಗದವಲ್ಲಿ

ತೀರ್ಥಂ : ಹೇಮಪುಷ್ಕರಣಿ, ಸಕ್ಕರೆ ತೀರ್ಥ, ಕೃತಮಾಳ ನದಿ, ವೈಗೈ ನದಿ

ವಿಮಾನಂ : ಅಷ್ಟಾಂಗ ವಿಮಾನಂ

ಪ್ರತ್ಯಕ್ಷಗೊಂಡಿರುವುದು: ಬೃಗು ಮುನಿ, ಪೆರಿಯಾಳ್ವಾರ್, ಶೌನಕಾದಿಗಳು

ಮಂಗಳಶಾಸನ ಮಾಡಿರುವವರು :

1. ಪೆರಿಯಾಳ್ವಾರ್, 2.ತಿರುಮಂಗೈಆಳ್ವಾರ್, 3. ತಿರುಮಳಿಶಿ ಆಳ್ವಾರ್

# 102. ತಿರುಮಾಲಿರುಂಸೋಳೈ (ಅಳಗರ್ ಕೋಯಿಲ್)

॥ ಓಂ ಶ್ರೀಸುಂದರವಲ್ಲಿ ಸಮೇತ ಶ್ರೀಅಳಗರ್ ಸ್ವಾಮಿನೇ ನಮಃ ॥

ಇದನ್ನು ಅಳಹರ್ ಸನ್ನಿಧಿ ಅಥವಾ ಕಲ್ಲಳಹರ್ ಸನ್ನಿಧಿ ಎಂದು ಕರೆಯುತ್ತಾರೆ. ಮಧುರೈಗೆ ಈಶಾನ್ಯದ ಕಡೆ ಹೆದ್ದಾರಿಯಲ್ಲಿ 12 ಮೈಲಿ ದೂರದಲ್ಲಿ ಈ ದಿವ್ಯಕ್ಷೇತ್ರವಿದೆ. ದೇವಸ್ಥಾನವು ಬೆಟ್ಟದ ತಪ್ಪಲಿನಲ್ಲಿದ್ದು ಬೆಟ್ಟಕ್ಕೆ ವೃಷಭಗಿರಿ ಎಂದು ಹೆಸರು.

**ನೂಪುರಗಂಗಾ** ಎಂದು ಕರೆಯಲ್ಪಡುವ ನೂಪುರ ನದಿಯು ಬೆಟ್ಟದ ಉತ್ತರದಲ್ಲಿ ಮೇಲೆ ಮೂರು ಮೈಲಿ ದೂರದಲ್ಲಿದೆ. ಸನ್ನಿಧಿಯ ಸುತ್ತಲೂ ಅರಣ್ಯವಿದೆ. ನೂಪುರ ನದಿಯಿಂದ ದೇವಾಲಯದ ಒಳಭಾಗದಲ್ಲಿ ಶುಭ್ರವಾದ ನೀರು ಹರಿದು ಬರುತ್ತದೆ. ಆಲಯದ ಸುತ್ತಲೂ ಕೋಟೆ ಇದೆ. ಇದನ್ನು ಪಾಂಡ್ಯರಾಜನಾದ ಮಧುರೆಯ ತಿರುಮಲ ನಾಯಕನು ನಿರ್ಮಿಸಿದನು. ಇವನು ಈ ಆಲಯಕ್ಕೆ ಬಹಳಷ್ಟು ಕೈಂಕರ್ಯಗಳನ್ನು ಮಾಡಿದ್ದಾನೆ.

ಇಲ್ಲಿನ ಮೂಲ ಹಾಗೂ ಉತ್ಸವ ಮೂರ್ತಿಗಳೆರಡೂ ಭವ್ಯವಾಗಿ ಸುಂದರಮೂರ್ತಿಗಳಾಗಿ ತೇಜೋಮಯವಾಗಿವೆ. ಈ ಉತ್ಸವಮೂರ್ತಿ ಸಂಪೂರ್ಣವಾಗಿ ಚಿನ್ನದ ಮೂರ್ತಿ. ಇಲ್ಲಿನ ದೇವರಿಗೆ ನೈವೇದ್ಯ ಮಾಡುವ ದೋಸೆ ಬಹಳ ದೊಡ್ಡದು. ಇಲ್ಲಿನ ನೈವೇದ್ಯವೆಲ್ಲ ಬೆಣ್ಣೆ ಕಾಯಿಸಿದ ಶುದ್ಧ ತುಪ್ಪದಿಂದಲೇ ತಯಾರಿಸುತ್ತಾರೆ.

ಚಿತ್ರಾ ಪೌರ್ಣಮಿಯಂದು ಮಧುರೈನಿಂದ ವೈಗೈ ನದಿಗೆ ಬರುವ ಈ ಸ್ವಾಮಿಯ 'ನದಿ ಉತ್ಸವ'ವು ಜಗತ್ಪ್ರಸಿದ್ಧವಾದುದು. ನಮ್ಮಾಳ್ವಾರರ ಪಾಶುರಗಳು ಮತ್ತು ಕೂರತ್ತಾಳ್ವಾರರ ಸ್ತೋತ್ರಗಳಲ್ಲಿ ಈ ವೈಭವವನ್ನು ವಿಶೇಷವಾಗಿ ವಿವರಿಸಲಾಗಿದೆ. ಈ ಸ್ವಾಮಿ ಸನ್ನಿಧಿಯ ಗೋಪುರ ದ್ವಾರದ ಸೋಪಾನಗಳಲ್ಲಿ 18 ನೇ ಸೋಪಾನಕ್ಕೆ 'ಕರುಪ್ಪಣ್ಣ ಸ್ವಾಮಿ' ಎಂಬ ದೇವರು ಇದ್ದಾರೆ.

ವಾಮನ ಮೂರ್ತಿಯು ಒಂದು ಕಾಲನ್ನು ಭೂಮಿಯಲ್ಲಿಟ್ಟು ಎರಡನೇ ಕಾಲನ್ನು ಆಕಾಶದಲ್ಲಿಡಲು ಮೇಲಕ್ಕೆತ್ತುತ್ತಿರುವ ಸಮಯದಲ್ಲಿ ಬ್ರಹ್ಮನು ತಮ್ಮ ತಂದೆಯವರ ಪಾದ ಬರುತ್ತಿರುವುದನ್ನು ಕಂಡು ಪಾದ ಪೂಜೆಯನ್ನು ಮಾಡಿದರು.

ಆಗ ನಾರಾಯಣನ ಕಾಲಿನ ಕಡಗದಲ್ಲಿರುವ ಒಂದು ಮುತ್ತಿನಿಂದ ಒಂದು ಹನಿ ನೀರು ಈ ಸ್ಥಳದಲ್ಲಿ ಬಿತ್ತು. ಆ ಒಂದು ಹನಿ ನೀರು ಶಿಲಂಬಾರು ಎಂಬ ನದಿಯಾಗಿ ಹರಿಯಿತು.

ಮೂಲವರ್ : ಅಳಗರ್, ಕಲ್ಲಳಗರ್

ಉತ್ಸವರ್ : ಕಲ್ಲಳಗರ್

ತಾಯಾರ್ : ಸುಂದರವಲ್ಲಿ, ಶ್ರೀದೇವಿ

ತೀರ್ಥಂ : ನೂಪುರ ಗಂಗ, ಶಿಲಂಬಾರು

ವಿಮಾನಂ : ಸೋಮಸುಂದರ ವಿಮಾನಂ

ಪ್ರತ್ಯಕ್ಷಗೊಂಡಿರುವುದು : ಪಾಂಡ್ಯ ಮಹಾರಾಜ, ಧರ್ಮದೇವತೆ

ಮಂಗಳಶಾಸನ ಮಾಡಿರುವವರು :

1. ಪೆರಿಯಾಳ್ವಾರ್, 2. ಆಂಡಾಳ್, 3. ತಿರುಮಂಗೈಆಳ್ವಾರ್, 4. ಬೂತತ್ತಾಳ್ವಾರ್, 5. ಪೇಯ್ ಆಳ್ವಾರ್, 6. ನಮ್ಮಾಳ್ವಾರ್.



# 103. ತಿರುಮೋಗೂರ್

॥ ಓಂ ಶ್ರೀಮೋಹನವಲ್ಲಿ ಸಮೇತ ಶ್ರೀಕಾಲಮೇಘ ಸ್ವಾಮಿನೇ ನಮಃ ॥

ಮಧುರೈನಿಂದ ಈ ಸ್ಥಳಕ್ಕೆ ಟೌನ್ ಬಸ್ಸುಗಳು ತುಂಬಾ ಇವೆ.

ಅಮೃತವನ್ನು ಹಂಚುವ ನೆಪದಲ್ಲಿ ಮೋಹಿನಿ ಅವತಾರವನ್ನೆತ್ತಿದ ಶ್ರೀ ಮಹಾವಿಷ್ಣುವು ದೇವತೆಗಳಿಗೆ ಅಮೃತವನ್ನು ಹಂಚುತ್ತಾನೆ. ರಾಕ್ಷಸರು ಮೋಹಿನಿಯ ಸೌಂದರ್ಯಕ್ಕೆ ಮರುಳಾಗಿ ಅವಳನ್ನೇ ನೋಡುತ್ತಿರುತ್ತಾರೆ. ದೇವತೆಗಳಿಗೆ ನಾರಾಯಣನು ಅಮೃತವನ್ನು ಹಂಚುತ್ತಿರುವಾಗ ಒಂದು ಹನಿ ಅಮೃತವು ಈ ಸ್ಥಳದಲ್ಲಿ ಬಿದ್ದಿತು. ಇಂದಿಗೂ ಕ್ಷೀರಾಬ್ಧಿ ಪುಷ್ಕರಣಿಯಾಗಿ ಇದೇ ಸ್ಥಳದಲ್ಲಿದೆ.

ಈ ಸ್ಥಳದಲ್ಲಿ ಚಕ್ರತ್ತಾಳ್ವಾರ್ ದೇವಾಲಯುವಿದೆ. ಎಲ್ಲಾ ವಿಷ್ಣು ದೇವಾಲಯುಗಳಲ್ಲೂ ಚಕ್ರತ್ತಾಳ್ವಾರ್ ದೇಗುಲವಿರುತ್ತದೆ. ಆದರೆ ಈ ದೇವಸ್ಥಾನದಲ್ಲಿರುವ ಚಕ್ರತ್ತಾಳ್ವಾರ್ ಬಹಳ ವಿಶೇಷ. ಇಲ್ಲಿ ಸಿಗುವ ಶ್ರೀಚಕ್ರವನ್ನು ಮನೆಗೆ ತಂದು ಪೂಜಿಸಬಹುದು. ಈ ಊರಿಗೆ ಚಕ್ರತ್ತಾಳ್ವಾರ್ ದೇವಸ್ಥಾನವೆಂದೂ ಹೇಳುತ್ತಾರೆ.

ಮೂಲವರ್ : ಕಾಲಮೇಘ ಪೆರುಮಾಳ್

ಉತ್ಸವರ್ : ತಿರುಮೊಹೂರ್ ಆಪ್ತನ್

ತಾಯಾರ್ : ಮೋಗೂರ್‌ವಲ್ಲಿ, ಮೋಹನವಲ್ಲಿ, ಮೇಘವಲ್ಲಿ

ತೀರ್ಥಂ : ಕ್ಷೀರಾಬ್ಧಿ ಪುಷ್ಕರಣಿ

ವಿಮಾನಂ : ಚತುರ್ಮುಖ ವಿಮಾನಂ

ಪ್ರತ್ಯಕ್ಷಗೊಂಡಿರುವುದು : ಬ್ರಹ್ಮ, ಇಂದ್ರ, ರುದ್ರ

ಮಂಗಳಶಾಸನ ಮಾಡಿರುವವರು :

1.ತಿರುಮಂಗೈಆಳ್ವಾರ್, 2. ನಮ್ಮಾಳ್ವಾರ್

# 104. ತಿರುಕೋಟಿಯೂರ್ (ತಿರುಕೋಷ್ಠಿಯೂರ್)

॥ ಓಂ ಶ್ರೀತಿರುಮಾಮಗಳ್ ಸಮೇತ ಶ್ರೀಸೌಮ್ಯನಾರಾಯಣ ಸ್ವಾಮಿನೇ ನಮಃ ॥

ಮಧುರೈನಿಂದ ಬಸ್ಸಿನಲ್ಲಿ ತಿರುಪತ್ತೂರಿಗೆ ಬಂದು ಅಲ್ಲಿಂದ 10 ಕಿಮೀ ದೂರದಲ್ಲಿ ಈ ಕ್ಷೇತ್ರವಿದೆ.

ಈ ದೇವಸ್ಥಾನದ ಶಿಲ್ಪವಿನ್ಯಾಸ ತುಂಬಾ ಚೆನ್ನಾಗಿದೆ. ನಾಲ್ಕು ಅಂತಸ್ತುಗಳಿವೆ. ಒಂದರಲ್ಲಿ ಶಯನದ ನಿಲುವು, ಎರಡನೆಯದರಲ್ಲಿ ನಿಂತ ನಿಲುವು, ಮೂರನೆಯದರಲ್ಲಿ ಆಸೀನ ನಿಲುವು, ನಾಲ್ಕನೆಯದಾದ ಕೆಳ ಮಾಳಿಗೆಯಲ್ಲಿ ನೃತ್ಯದ ನಿಲುವು ಇದೆ.

ಈ ದೇವಾಲಯದಲ್ಲಿನ ಅರ್ಚಾ ವಿಗ್ರಹವು ಬೆಳ್ಳಿಯಿಂದ ಮಾಡಲ್ಪಟ್ಟಿರುವುದು ಇಲ್ಲಿನ ಒಂದು ಮುಖ್ಯ ವಿಶೇಷ.

ಶ್ರೀ ರಾಮಾನುಜರು ಶ್ರೀರಂಗಂನಿಂದ ಈ ಸ್ಥಳಕ್ಕೆ 18 ಸಲ ಕಾಲ್ನಡಿಗೆಯಲ್ಲಿಯೇ ಪ್ರಯಾಣ ಮಾಡಿ ನಂಬಿ ಎಂಬ ಗುರುಗಳ ಗುರೋಪದೇಶಕ್ಕೋಸ್ಕರ ಬರುತ್ತಾರೆ. ಅವರು ಮೊದಲ ಸಲ ನಂಬಿಯವರ ಮನೆಗೆ ಬಂದು 'ನಾನು ರಾಮಾನುಜ ಬಂದಿದ್ದೇನೆ' ಎನ್ನುತ್ತಾರೆ. ಆಗ ನಂಬಿಯು 'ನಾನು ಸತ್ತಮೇಲೆ ಬಾ' ಎಂದು ಹಿಂದಕ್ಕೆ ಕಳುಹಿಸುತ್ತಾರೆ. ಈ ಮಾತಿನ ಅರ್ಥ ರಾಮಾನುಜರಿಗೆ ಆಗಲಿಲ್ಲ. ಇದೇ ರೀತಿ 17 ಸಲ ಬರುತ್ತಾರೆ. ಹದಿನೆಂಟನೆಯ ಸಲ ಬಂದಾಗ ನಂಬಿಯ ಮನೆಯ ಬಾಗಿಲು ಬಡಿದು 'ನಿಮ್ಮ ರಾಮಾನುಜ ಬಂದಿದ್ದೇನೆ' ಎನ್ನುತ್ತಾರೆ. ಆಗ ನಂಬಿಯು ಬಾಗಿಲನ್ನು ತೆಗೆದು ಏನು ವಿಷಯವೆಂದು ಕೇಳುತ್ತಾರೆ. ರಾಮಾನುಜರು ನಂಬಿಯ ಬಳಿ ನಿಮ್ಮ ಗುರೋಪದೇಶ ಬೇಕಾಗಿತ್ತು ಎನ್ನುವಾಗ ನಂಬಿಯು 'ಆಯ್ತು. ನಾನು ಗುರೋಪದೇಶ ಮಾಡುತ್ತೇನೆ. ಆದರೆ ಅದನ್ನು ನೀನು ಬೇರೊಬ್ಬರ ಬಳಿ ಹೇಳಿದರೆ ನೀನು ನರಕಕ್ಕೆ ಹೋಗುವೆ. ಅವರು ಸ್ವರ್ಗಕ್ಕೆ ಹೋಗುತ್ತಾರೆ. ಅದೇ ರೀತಿ ಅವರು ಬೇರೊಬ್ಬರಿಗೆ ಹೇಳಿದರೂ, ಬೇರೊಬ್ಬರು ಇನ್ನೊಬ್ಬರಿಗೆ ಹೇಳಿದರೂ ಅವರು ನರಕಕ್ಕೆ ಹೋಗುತ್ತಾರೆ. ಆದ ಕಾರಣ ನೀನು ಮಾತ್ರ ಗುರೋಪದೇಶ ಪಡೆದುಕೋ ನೀನು ಯಾರಿಗೂ ಈ ಮಂತ್ರವನ್ನು ಉಪದೇಶ ಮಾಡಕೂಡದೆಂದು ಭಾಷೆ, ಪ್ರಮಾಣ ತೆಗೆದುಕೊಂಡು 'ಓಂ ನಮೋ ನಾರಾಯಣಾಯ' ಎಂಬ ಅಷ್ಟಾಕ್ಷರ ಮಂತ್ರದ ಉಪದೇಶವನ್ನು ಮಾಡುತ್ತಾರೆ. ಉಪದೇಶವನ್ನು ಪಡೆದ ರಾಮಾನುಜರು ದೇಗುಲದ ಗೋಪುರದ ನಾಲ್ಕನೇ ಅಂತಸ್ತಿನಲ್ಲಿ ನಿಂತು ನಗಾರಿ

ಬಾರಿಸಿ ಊರಿನ ಎಲ್ಲ ಪ್ರಜೆಗಳನ್ನೂ ಕರೆದು ತಾನು ಪಡೆದ ಗುರೋಪದೇಶವನ್ನು ಬಹಳ ದೊಡ್ಡ ದನಿಯಲ್ಲಿ ಎಲ್ಲರಿಗೂ ಹೇಳುತ್ತಾರೆ. ಆಗ ಅದನ್ನು ಕೇಳಿಸಿಕೊಂಡ ನಂಬಿಯು ದೇಗುಲದ ಬಳಿ ರಾಮಾನುಜರನ್ನು ತುಂಬಾ ಬೈಯ್ಯುತ್ತಾ ದೇಗುಲದ ಗೋಪುರವನ್ನು ಹತ್ತಿ ರಾಮಾನುಜರನ್ನು ಉದ್ದೇಶಿಸಿ 'ಲೋ ಗುರುದ್ರೋಹಿ, ಕುಲಭ್ರಷ್ಟ ನೀನೇನು ಮಾಡುತ್ತಿರುವೆ. ನಾನು ನಿಮಗೆ ಮೊದಲೇ ಹೇಳಿರಲಿಲ್ಲವೇ? ನೀನು ಯಾರಿಗೂ ಮಂತ್ರೋಪದೇಶ ಮಾಡಬಾರದೆಂದು? ಪ್ರಮಾಣ ಬೇರೆ ಮಾಡಿ ಮತ್ತೆ ಊರಿನ ಜನರೆಲ್ಲರಿಗೂ ಮಂತ್ರೋಪದೇಶ ಮಾಡಿದೆಯಲ್ಲಾ? ಎಂತಹ ಕೆಲಸ ಮಾಡಿಬಿಟ್ಟೆ ನೀನು ರೌರವ ನರಕಕ್ಕೆ ಹೋಗುತ್ತೀಯೆ' ಎಂದು ಹೀಯಾಳಿಸಿದನು.

ರಾಮಾನುಜರು ಸೌಮ್ಯವಾಗಿ 'ಗುರುಗಳೇ ಕ್ಷಮಿಸಿ, ನೀವು ಹೇಳಿದ ರೀತಿ ನಾನೊಬ್ಬ ಮಾತ್ರ ನರಕಕ್ಕೆ ಹೋಗುತ್ತೇನೆ. ಆದರೆ ಈ ಊರ ಜನರೆಲ್ಲರೂ ಸ್ವರ್ಗಕ್ಕೆ ಹೋಗುತ್ತಾರಲ್ಲವೇ? ನಾನೊಬ್ಬ ನರಕಕ್ಕೆ ಹೋದರೂ ಪರವಾಗಿಲ್ಲ. ಈ ಊರ ಜನರು ಸ್ವರ್ಗಕ್ಕೆ ಹೋಗುವುದು ನನಗೆ ಬಹಳ ಮುಖ್ಯ' ಎನ್ನುತ್ತಾರೆ. ಇವರ ಮಾತನ್ನು ಕೇಳಿದ ನಂಬಿ 'ನಾನು ಗುರುವಲ್ಲ. ನೀನೇ ನನ್ನ ಗುರು ಎಂದು ರಾಮಾನುಜರ ಪಾದಾರವಿಂದಗಳಿಗೆ ವಂದಿಸುತ್ತಾರೆ.

ಊರ ಜನರನ್ನೆಲ್ಲಾ ಕರೆದು ಗೋಷ್ಠಿ ಮಾಡಿದ ಸ್ಥಳವಾದ್ದರಿಂದ ಈ ಊರಿಗೆ ತಿರುಗೋಷ್ಠಿಯೂರ್ ಎಂಬ ಹೆಸರು ಬಂದಿತು.

ಬ್ರಹ್ಮ, ವಿಷ್ಣು, ಶಿವ ಮತ್ತು ದೇವಾದಿ ದೇವತೆಗಳು ಎಲ್ಲರೂ ಹಿರಣ್ಯ ವಧೆಗಾಗಿ ಒಂದಾಗಿ ಸೇರಿ ಮಾತನಾಡಲು ಈ ಸ್ಥಳಕ್ಕೆ ಬಂದಿದ್ದರಿಂದ ಈ ಸ್ಥಳವನ್ನು 'ತಿರುಕೋಟ್ಟಿಯೂರ್' ಎಂದೂ ಕರೆಯುತ್ತಾರೆ.

**ಮೂಲವರ್ : ಉರಗಮೆಲ್ಲನಯಾನ್**
**ಉತ್ಸವರ್ : ಸೌಮ್ಯ ನಾರಾಯಣ**
**ತಾಯಾರ್ : ತಿರುಮಾಮಗಳ್ ನಾಚ್ಚಿಯಾರ್**
**ತೀರ್ಥಂ : ದೇವಪುಷ್ಕರಣಿ, ಕ್ಷೀರ ಸಮುದ್ರ**
**ವಿಮಾನಂ : ಅಷ್ಟಾಂಗ ವಿಮಾನಂ**
**ಪ್ರತ್ಯಕ್ಷಗೊಂಡಿರುವುದು: ಇಂದ್ರ, ಕದಂಬ ಮುನಿ**

**ಮಂಗಳಶಾಸನ ಮಾಡಿರುವವರು :**

**1. ಪೆರಿಯಾಳ್ವಾರ್, 2.ತಿರುಮಂಗೈಆಳ್ವಾರ್, 3. ಬೂತತ್ತಾಳ್ವಾರ್, 4. ಪೇಯ್ಆಳ್ವಾರ್ 5. ತಿರುಮಳಿಶೈಆಳ್ವಾರ್**

# 105. ತಿರುಪ್ಪುಲ್ಲಾಣಿ (ದರ್ಭಶಯನ)

॥ ಓಂ ಶ್ರೀಕಲ್ಯಾಣವಲ್ಲಿ ಸಮೇತ ಶ್ರೀಕಲ್ಯಾಣಜಗನ್ನಾಥ ಸ್ವಾಮಿನೇ ನಮಃ ॥

ರಾಮನಾಥಪುರದಿಂದ 10 ಕಿಮೀ ದೂರದಲ್ಲಿ ಪುಲಾಣ್ಯೈ ಅಥವಾ ತಿರುಪುಲ್ಲಾಣಿ ಅಥವಾ ಧರ್ಭ ಶಯನ ಕ್ಷೇತ್ರವಿದೆ.

ಶ್ರೀರಾಮನು ಸೀತಾನ್ವೇಷಣೆ ಸಮಯದಲ್ಲಿ ಲಂಕೆಗೆ ಹೋಗಲು ಸಮುದ್ರದಲ್ಲಿ ಸೇತುವೆ ಕಟ್ಟಲು ಸಮುದ್ರರಾಜನ ಅಪ್ಪಣೆಗಾಗಿ ಕಾಯುತ್ತಿದ್ದಾಗ ಆಂಜನೇಯನು ದರ್ಭೆಯಲ್ಲಿ ಹಾಸಿಗೆಯನ್ನು ಮಾಡಿ ಶ್ರೀರಾಮನಿಗೆ ಮಲಗಲು ಹೇಳಿದನು. ದರ್ಭೆಯ ಮೇಲೆ ಶಯನಿಸಿದ ಸ್ಥಳವಾದ್ದರಿಂದ ಈ ಸ್ಥಳವನ್ನು ದರ್ಭಶಯನ ಎನ್ನುತ್ತಾರೆ.

ದರ್ಭಶಯನದಲ್ಲಿ ಎರಡು ದೊಡ್ಡ ದೇವಸ್ಥಾನಗಳಿವೆ. ಒಂದರಲ್ಲಿ ಕಲ್ಯಾಣ ಜಗನ್ನಾಥನ್ (ಪಟ್ಟಾಭಿರಾಮನ್), ಮತ್ತೊಂದರಲ್ಲಿ ದರ್ಭಶಯನ ಶ್ರೀರಾಮನ ಸನ್ನಿಧಿ ಇದೆ. ದರ್ಭಶಯನದ ಸನ್ನಿಧಿಯಲ್ಲಿ ದೇವಗಣಗಳ ಸಹಿತ, ವಿಭೀಷಣ ದರ್ಭೆಯ ಮೇಲೆ ಶಯನಿಸಿರುವ ಶ್ರೀರಾಮನನ್ನು ಸೇವಿಸುತ್ತಿರುವರು. ಈ ದೇವಾಲಯವು ಪ್ರಶಾಂತ ವಾತಾವರಣದಲ್ಲಿದ್ದು ಮನಸ್ಸಿಗೆ ಸಂತೋಷವನ್ನು ನೀಡುತ್ತದೆ.

**ಮೂಲವರ್ :** ಕಲ್ಯಾಣ ಜಗನ್ನಾಥನ್, ಶ್ರೀರಾಮ, ದರ್ಭಶಯನ
**ತಾಯಾರ್ :** ಕಲ್ಯಾಣವಲ್ಲಿ, ಪದ್ಮಾಸಿನಿ
**ತೀರ್ಥಂ :** ಹೇಮ ತೀರ್ಥಂ, ಚಕ್ರತೀರ್ಥಂ, ರತ್ನಾಕರ ಸಮುದ್ರ
**ಸ್ಥಳ ವೃಕ್ಷಂ :** ಅಶ್ವತ್ಥ ವೃಕ್ಷ
**ವಿಮಾನಂ :** ಕಲ್ಯಾಣ ವಿಮಾನಂ

**ಪ್ರತ್ಯಕ್ಷಗೊಂಡಿರುವುದು :** ಅಶ್ವತ್ಥ ನಾರಾಯಣ, ಪುಲ್ಲಾರಣ್ಯ ಮುನಿ, ಸಮುದ್ರ ರಾಜ

**ಮಂಗಳಶಾಸನ ಮಾಡಿರುವವರು :**

1. ತಿರುಮಂಗೈಆಳ್ವಾರ್

# 106. ತಿರುಮೇಯ್ಯಂ

॥ ಓಂ ಶ್ರೀಉಯ್ಯವಂದ ಸಮೇತ ಶ್ರೀಸತ್ಯಗಿರಿನಾಥ ಸ್ವಾಮಿನೇ ನಮಃ ॥

ತಿರುಚ್ಚಿಯಿಂದ 45ಮೈಲಿಗಳ ದೂರದಲ್ಲಿ ಮಧುರೈಗೆ ಹೋಗುವ ಮಾರ್ಗದಲ್ಲಿ ತಿರುಮೆಯ್ಯಂ ರೈಲ್ವೆ ನಿಲ್ದಾಣದಿಂದ ಅರ್ಧ ಮೈಲಿ ದೂರದಲ್ಲಿ ಈ ಕ್ಷೇತ್ರವಿದೆ. ತಿರುಚ್ಚಿಯಿಂದ ತಿರುಪತ್ತೂರಿಗೆ ಹೋಗುವ ಬಸ್‌ಗಳೆಲ್ಲವೂ ಈ ಊರನ್ನು ಹಾದೇ ಹೋಗುತ್ತವೆ. ಇದು ಸಾಕಷ್ಟು ದೊಡ್ಡ ಊರು.

ರಾಕ್ಷಸರು ತಮಗೆ ಅಮೃತವು ಸಿಕ್ಕಿಲ್ಲವೆಂದು ಬಹಳ ಕೋಪದಿಂದ ಶೇಷಶಯನನಾದ ಮಹಾವಿಷ್ಣುವಿನ ಬಳಿಗೆ ಬರುತ್ತಾರೆ. ಇದನ್ನು ಕಂಡ ಶೇಷನು ರಾಕ್ಷಸರನ್ನು ಓಡಿಸಲು ತನ್ನ ಬಾಯಿಂದ ವಿಷಪೂರಿತ ಗಾಳಿಯನ್ನು ಬಿಡುತ್ತಾನೆ. ಅದನ್ನು ಕಂಡು ಹೆದರಿದ ರಾಕ್ಷಸರು ಹಿಂದಕ್ಕೆ ಓಡುತ್ತಾರೆ. ಇದನ್ನು ಮೆಚ್ಚಿ ಶ್ರೀಮನ್ನಾರಾಯಣನು ಆದಿಶೇಷನನ್ನು ಬಹಳ ಮೆಚ್ಚುತ್ತಾನೆ.

ಇಲ್ಲಿ ಶ್ರೀರಂಗದ ರಂಗನಾಥರಿಗಿಂತ ಬೃಹತ್ತಾದ ಶಯನಮೂರ್ತಿಯೊಂದಿದ್ದು ಬಹಳ ಆಕರ್ಷಕವಾಗಿದೆ. ಈ ಮೂರ್ತಿಯನ್ನು ಅಪಾದ ಮಸ್ತಕ ಸೇವಿಸುವುದು ಒಂದು ನೂತನ, ಆನಂದದ ಅನುಭವ.

ಮೂಲವರ್ : ಸತ್ಯಗಿರಿನಾಥನ್, ಸತ್ಯಮೂರ್ತಿ
ಉತ್ಸವರ್ : ಅಳಗಿಯಮೆಯ್ಯರ್
ತಾಯಾರ್ : ಉಯ್ಯವಂದ ನಾಚ್ಚಿಯಾರ್, ಉಜ್ಜೀವನ ತಾಯಾರ್
ತೀರ್ಥಂ : ಕದಂಬ ಪುಷ್ಕರಣಿ, ಸತ್ಯ ತೀರ್ಥಂ
ಸ್ಥಳ ವೃಕ್ಷಂ : ಆಲದ ಮರ
ವಿಮಾನಂ : ಸತ್ಯಗಿರಿ ವಿಮಾನಂ
ಪ್ರತ್ಯಕ್ಷಗೊಂಡಿರುವುದು: ಸತ್ಯದೇವತೆ

ಮಂಗಳಶಾಸನ ಮಾಡಿರುವವರು :

1. ತಿರುಮಂಗೈಆಳ್ವಾರ್

ಪಾಂಡ್ಯನಾಡು ದಿವ್ಯದೇಶಗಳು ಸಮಾಪ್ತಿ

# ದೇವಲೋಕದಲ್ಲಿರುವ ದಿವ್ಯ ದೇಶಗಳು

## 107. ತಿರುಪ್ಪಾರ್‌ಕಡಲ್

॥ ಓಂ ಶ್ರೀಶ್ರೀದೇವಿಭೂದೇವಿ ಸಮೇತ ಶ್ರೀಸ್ವರಾಬ್ಧಿನಾಥ ಸ್ವಾಮಿನೇ ನಮಃ ॥

ಇದನ್ನೇ ಕ್ಷೀರಾಬ್ಧಿ ಅಥವಾ ಕ್ಷೀರಸಮುದ್ರ ಎನ್ನುವುದು. ಉತ್ತರ ಮೆರುವಲಯದ ಆಚೆ ಇದೆ ಎಂದು ನಂಬಿಕೆ. ದೇವತೆಗಳು, ಋಷಿಗಳು, ಯೋಗಿಗಳು ಇತ್ಯಾದಿ ಸೂಕ್ಷ್ಮ ದೇಹಿಗಳು ಮಾತ್ರ ಇಲ್ಲಿಗೆ ಹೋಗಲು ಸಾಧ್ಯ. ಮಾನವ ಶರೀರದೊಂದಿಗೆ ಹೋಗಲು ಸಾಧ್ಯವಿಲ್ಲ. ಪರಮಾತ್ಮನ ಐದು ಸ್ವರೂಪಗಳಲ್ಲಿ ಒಂದಾದ ವ್ಯೂಹ ರೂಪದಲ್ಲಿ ಶ್ರೀಮನ್ನಾರಾಯಣನು ಇಲ್ಲಿ ನೆಲೆಸಿದ್ದಾನೆ. ಆದರೂ ಇದೊಂದು ದಿವ್ಯದೇಶವನ್ನಾಗಿ ಪರಿಗಣಿಸಲಾಗಿದೆ.

ಈ ದೇವರನ್ನು ದರ್ಶನ ಮಾಡಲು 106 ದಿವ್ಯ ದೇಶವನ್ನು ದರ್ಶಿಸಿದ ಮೇಲೆ ಈ 107ನೇ ದಿವ್ಯ ದೇಶ ಪೆರುಮಾಳ್ ಸ್ವರಾಬ್ಧಿನಾಥನ್ ನಿಮಗೆ ದರ್ಶನ ಕೊಡಲು ನಿಮ್ಮ ಬಳಿಗೇ ಬರುತ್ತಾನೆ.

ಶ್ರೀ ಮನ್ನಾರಾಯಣನು ಬ್ರಹ್ಮ ಮತ್ತು ದೇವತೆಗಳ ಕಷ್ಟವನ್ನು ವಿಚಾರಿಸಲು ಪ್ರತ್ಯಕ್ಷನಾಗುವುದು ಇಲ್ಲಿಯೇ. ಭಕ್ತಾದಿಗಳ ಸರಂರಕ್ಷಣೆಗಾಗಿ ಆತನು ಇಲ್ಲಿಂದಲೇ ಅವತರಿಸುವನು. ಇಲ್ಲಿಯೇ ಅಮೃತಮಂಥನವಾಗಿ ಅಮೃತೋತ್ಪತ್ತಿಯಾಯಿತು. ಲಕ್ಷ್ಮಿಯು ಇಲ್ಲಿಯೇ ಉದ್ಭವಿಸಿದಳು.

ಮೂಲವರ್ : ಸ್ವರಾಬ್ಧಿನಾಥನ್, ಆದಿಶೇಷ ಶಯನಂ
ತಾಯಾರ್ : ಶ್ರೀದೇವಿ, ಭೂದೇವಿ
ತೀರ್ಥಂ : ತಿರುಪಾರ್ಕಡಲ್, ಕ್ಷೀರ ಸಮುದ್ರ
ಪ್ರತ್ಯಕ್ಷ ಗೊಂಡಿರುವುದು : ಬ್ರಹ್ಮ, ರುದ್ರ, ದೇವಾದಿದೇವತೆಗಳು
ಮಂಗಳಶಾಸನ ಮಾಡಿರುವವರು :

1. ಪೆರಿಯಾಳ್ವಾರ್, 2. ಆಂಡಾಳ್, 3. ಕುಲಶೇಖರ ಆಳ್ವಾರ್, 4. ತಿರುಮಳಿಶೈ ಆಳ್ವಾರ್, 5. ತೊಂಡರಡಿಪಡಿ ಆಳ್ವಾರ್, 6.ತಿರುಮಂಗೈಆಳ್ವಾರ್, 7. ಪೊಯ್‌ಗೈ ಆಳ್ವಾರ್, 8. ಬೂತತ್ತಾಳ್ವಾರ್ 9. ಪೇಯ್ ಆಳ್ವಾರ್, 10. ನಮ್ಮಾಳ್ವಾರ್

# 108. ತಿರುಪರಮಪದ (ಶ್ರೀವೈಕುಂಠ)

॥ ಓಂ ಶ್ರೀಮಹಾಲಕ್ಷ್ಮೀ ಸಮೇತ ಶ್ರೀಪರಮಪದನಾಥ ಸ್ವಾಮಿನೇ ನಮಃ ॥

ಶ್ರೀಮನ್ನಾರಾಯಣನ ನಿತ್ಯ ಆವಾಸಸ್ಥಾನ ಇದು ಬ್ರಹ್ಮಾಂಡದ ಆಚೆಯಿದೆ. ಪರಮಾತ್ಮನು ಇಲ್ಲಿ ಪರಸ್ವರೂಪದಲ್ಲಿ ದರ್ಶನ ನೀಡುತ್ತಿದ್ದಾನೆ. ದೇಶ, ಕಾಲಗಳಿಗೆ ಅತೀತವಾದ ತಮೋರಜೋಗುಣಗಳಿಲ್ಲದ ನಿತ್ಯವಿಭೂತಿ ಸ್ಥಾನವಿದು. ಇಲ್ಲಿ ಶ್ರೀಮನ್ನಾರಾಯಣನು ಶ್ರೀ, ಭೂ, ನೀಳಾದೇವಿಯರೊಂದಿಗೆ ಸದಾ ವಿರಾಜಮಾನನಾಗಿರುತ್ತಾನೆ. ಎಲ್ಲ ಜೀವಿಗಳೂ ಸೇರಬೇಕಾದ ಅಂತಿಮ ಸ್ಥಾನ, ಪರಮಪದ ಮೋಕ್ಷವಿದು. ನಿತ್ಯ ಸೂರಿಗಳು, ಮುಕ್ತರು ಸದಾ ಸ್ವಾಮಿಯನ್ನು ಸೇವಿಸುತ್ತಾ ಬ್ರಹ್ಮಾನಂದದಿಂದ ನಿತ್ಯ ಕೈಂಕರ್ಯಪರರಾಗಿರುತ್ತಾರೆ. ಇಲ್ಲಿ ಸೇರಿದ ಜೀವಾತ್ಮರುಗಳಿಗೆ ಪುನರ್ಜನ್ಮವಿಲ್ಲ. ಲೋಕೋದ್ಧಾರಕ್ಕಾಗಿ ಪರಮಾತ್ಮನ ಸಂಕಲ್ಪದಂತೆ ಕೆಲವು ಮುಕ್ತಾತ್ಮರು ಭೂಮಿಯ ಮೇಲೆ ಅವತಾರ ಮಾಡುತ್ತಾರೆ.

106 ದಿವ್ಯ ದೇಶ ದರ್ಶನಾನಂತರ 107ನೇ ದಿವ್ಯ ದೇಶದ ಪೆರುಮಾಳ್ ನಿಮ್ಮನ್ನು ನೋಡಲು ಯಾವುದೋ ರೂಪದಲ್ಲಿ ಖುದ್ದಾಗಿ ಬರುತ್ತಾರೆ. ಆ ಸಮಯದಲ್ಲಿ 108ನೇ ದಿವ್ಯ ದೇಶ ದರ್ಶನದ ಸಮಯವನ್ನು ಆ ಮಹಾವಿಷ್ಣುವು ತಿಳಿಸುತ್ತಾರೆ.

ಈ ದಿವ್ಯದೇಶ ದರ್ಶನ ಮಾಡುವವರು ಮುಕ್ತಿಯನ್ನು ಹೊಂದಿರುವವರು ಮಾತ್ರ ಅವರು ಮತ್ತೆ ಭೂಲೋಕ ದರ್ಶನ ಮಾಡುವುದಿಲ್ಲ. ಅವರೇ ಜ್ಯೋತಿ ಸ್ವರೂಪರು.

ಮೂಲವರ್ : ಶ್ರೀ ಮಹಾವಿಷ್ಣು, ಪರಮಪದನಾಥನ್, ವೈಕುಂಠ ವಾಸ
ತಾಯಾರ್ : ಮಹಾಲಕ್ಷ್ಮಿ
ತೀರ್ಥಂ : ಪ್ರಜಾ ನದಿ
ವಿಮಾನಂ : ಅನಂತಗರುಡವಿಶ್ವಕ್ಸೇನಾದಿನಿತ್ಯಸೂರ್ಯ
ಪ್ರತ್ಯಕ್ಷಗೊಂಡಿರುವುದು: ಮುಕ್ತಿಗೊಂಡಿರುವವರು

ಮಂಗಳಶಾಸನ ಮಾಡಿರುವವರು :

1. ಪೇರಿಯಾಳ್ವಾರ್, 2. ಆಂಡಾಳ್, 3. ತಿರುಮಳಿಶೈ ಆಳ್ವಾರ್, 4. ತಿರುಪ್ಪಾನ್ ಆಳ್ವಾರ್, 5. ತಿರುಮಂಗೈ ಆಳ್ವಾರ್, 6. ಪೊಯ್‌ಗೈ ಆಳ್ವಾರ್, 7. ಪೇಯ್ ಆಳ್ವಾರ್, 8. ನಮ್ಮಾಳ್ವಾರ್

॥ ಓಂ ನಮೋ ನಾರಾಯಣಾಯ ॥



# ಶ್ರೀ ವೇಂಕಟೇಶ್ವರ ಸುಪ್ರಭಾತ

ಕೌಸಲ್ಯಾ ಸುಪ್ರಜಾ ರಾಮ ಪೂರ್ವಾಸಂಧ್ಯಾ ಪ್ರವರ್ತತೇ ।
ಉತ್ತಿಷ್ಠ ನರಶಾರ್ದೂಲ ಕರ್ತವ್ಯಂ ದೈವಮಾಹ್ನಿಕಮ್ ॥ 1 ॥

ಉತ್ತಿಷ್ಠೋತ್ತಿಷ್ಠ ಗೋವಿಂದ ಉತ್ತಿಷ್ಠ ಗರುಡಧ್ವಜ ।
ಉತ್ತಿಷ್ಠ ಕಮಲಾಕಾಂತ ತ್ರೈಲೋಕ್ಯಂ ಮಂಗಳಂ ಕುರು ॥ 2 ॥

ಮಾತಸ್ಸಮಸ್ತ ಜಗತಾಂ ಮಧುಕೈಟಭಾರೇಃ
ವಕ್ಷೋವಿಹಾರಿಣಿ ಮನೋಹರ ದಿವ್ಯಮೂರ್ತೇ ।
ಶ್ರೀಸ್ವಾಮಿನ ಶ್ರಿತಜನಪ್ರಿಯ ದಾನಶೀಲೇ
ಶ್ರೀ ವೇಂಕಟೇಶ ದಯಿತೇ ತವ ಸುಪ್ರಭಾತಮ್ ॥ 3 ॥

ತವ ಸುಪ್ರಭಾತಮರವಿಂದ ಲೋಚನೇ
ಭವತು ಪ್ರಸನ್ನಮುಖ ಚಂದ್ರಮಂಡಲೇ ।
ವಿಧಿ ಶಂಕರೇಂದ್ರ ವನತಾಭಿರರ್ಚಿತೇ
ವೃಶ ಶೈಲನಾಥ ದಯಿತೇ ದಯಾನಿಧೇ ॥ 4 ॥

ಅತ್ರ್ಯಾದಿ ಸಪ್ತ ಋಷಯಸ್ಸಮುಪಾಸ್ಯ ಸಂಧ್ಯಾಂ
ಆಕಾಶ ಸಿಂಧು ಕಮಲಾನಿ ಮನೋಹರಾಣಿ ।
ಆದಾಯ ಪಾದಯುಗ ಮರ್ಚಯಿತುಂ ಪ್ರಪನ್ನಾಃ
ಶೇಷಾದ್ರಿ ಶೇಖರ ವಿಭೋ ತವ ಸುಪ್ರಭಾತಮ್ ॥ 5 ॥

ಪಂಚಾನನಾಬ್ಜ ಭವ ಷಣ್ಮುಖ ವಾಸವಾದ್ಯಾಃ
ತ್ರೈವಿಕ್ರಮಾದಿ ಚರಿತಂ ವಿಬುಧಾಃ ಸ್ತುವಂತಿ ।
ಭಾಷಾಪತಿಃ ಪಠತಿ ವಾಸರ ಶುದ್ಧಿ ಮಾರಾತ್
ಶೇಷಾದ್ರಿ ಶೇಖರ ವಿಭೋ ತವ ಸುಪ್ರಭಾತಮ್ ॥ 6 ॥

ಈಶತ್-ಪ್ರಫುಲ್ಲ ಸರಸೀರುಹ ನಾರಿಕೇಳ
ಪೂಗದ್ರುಮಾದಿ ಸುಮನೋಹರ ಪಾಲಿಕಾನಾಮ್ ।
ಆವಾತಿ ಮಂದಮನಿಲಃ ಸಹದಿವ್ಯ ಗಂಧೈಃ
ಶೇಷಾದ್ರಿ ಶೇಖರ ವಿಭೋ ತವ ಸುಪ್ರಭಾತಮ್ ॥ 7 ॥

ಉನ್ಮೀಲ್ಯನೇತ್ರ ಯುಗಮುತ್ತಮ ಪಂಜರಸ್ಥಾಃ
ಪಾತ್ರಾವಸಿಷ್ಟ ಕದಲೀ ಫಲ ಪಾಯಸಾನ ।
ಭುಕ್ತ್ವಾಃ ಸಲೀಲ ಮಥಕೇಳಿ ಶುಕಾಃ ಪಠಂತಿ
ಶೇಷಾದ್ರಿ ಶೇಖರ ವಿಭೋ ತವ ಸುಪ್ರಭಾತಮ್ ॥ 8 ॥

ತಂತ್ರೀ ಪ್ರಕರ್ಷ ಮಧುರ ಸ್ವನಯಾ ವಿಪಂಚ್ಯಾ
ಗಾಯತ್ಯನಂತ ಚರಿತಂ ತವ ನಾರದೋಪಿ ।
ಭಾಷಾ ಸಮಗ್ರ ಮಸತ್-ಕೃತಚಾರು ರಮ್ಯಂ
ಶೇಷಾದ್ರಿ ಶೇಖರ ವಿಭೋ ತವ ಸುಪ್ರಭಾತಮ್ ॥ 9 ॥

ಭೃಂಗಾವಳೀ ಚ ಮಕರಂದ ರಸಾನು ವಿದ್ಧ
ಝುಂಕಾರಗೀತ ನನದೈಃ ಸಹಸೇವನಾಯ ।
ನಿರ್ಯಾತ್ಯುಪಾಂತ ಸರಸೀ ಕಮಲೋದರೇಭ್ಯಃ
ಶೇಷಾದ್ರಿ ಶೇಖರ ವಿಭೋ ತವ ಸುಪ್ರಭಾತಮ್ ॥ 10 ॥

ಯೋಷಾಗಣೇನ ವರದಧ್ನಿ ವಿಮಥ್ಯಮಾನೇ
ಘೋಷಾಲಯೇಷು ದಧಿಮಂಥನ ತೀವ್ರಘೋಷಾಃ ।
ರೋಷಾತ್ಕಲಿಂ ವಿದಧತೇ ಕಕುಭಶ್ಚ ಕುಂಭಾಃ
ಶೇಷಾದ್ರಿ ಶೇಖರ ವಿಭೋ ತವ ಸುಪ್ರಭಾತಮ್ ॥ 11 ॥

